# ಸ್ವರವಚನ ಸಂಪುಟ

೬



ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ
ಮೈಸೂರು

ಸ್ವರವಚನ ಸಂಪುಟ : ೮

# ಬುದ್ಧಯ್ಯಸ್ವಾಮಿ ಸಂಕಲಿಸಿದ ಸ್ವರವಚನಗಳು

ಸಂಪಾದಕರು

ಡಾ. ಬಿ. ವಿ. ಮಲ್ಲಾಪುರ

ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ

ಜೆ.ಎಸ್.ಎಸ್. ಮಹಾವಿದ್ಯಾಪೀಠ, ಮೈಸೂರು.

BUDDHAYYASWAMI SANKALISIDA SWARAVACHANAGALU : Songs collected by Buddhayyaswami, Edited by Dr. B. V. Malhapura, Dharwad. Published by J.S.S. Granthamale, Mysore - 570 004. Pages : xxiv + 186, Price : Rs. 75.00

First Edition : 1998



ಮೊದಲನೆಯ ಮುದ್ರಣ : ೧೯೯೮



ಬೆಲೆ : ರೂ. ೭೫.೦೦

ಅಕ್ಷರ ಜೋಡಣೆ : ಅಖಿಲ ಗ್ರಾಫಿಕ್ಸ್
ಜಯನಗರ,
ಧಾರವಾಡ - ೫೮೦ ೦೦೧

ಮುದ್ರಕರು : ಸ್ನೇಹಾ ಪ್ರಿಂಟರ್ಸ್
೨೨, ೨ನೆಯ ಮುಖ್ಯ ರಸ್ತೆ
ಅತ್ತಿಗುಪ್ಪೆ, ವಿಜಯನಗರ ೨ನೇ ಹಂತ
ಬೆಂಗಳೂರು - ೫೬೦ ೦೪೦

# ಹಾರೈಕೆ

ವೀರಶೈವ ಧರ್ಮಪೀಠಗಳ, ವಿಶ್ವವಿದ್ಯಾಲಯಗಳ, ಸಾರ್ವಜನಿಕ ಸಂಸ್ಥೆಗಳ, ವಿದ್ವಾಂಸರ ಒಂದು ಶತಮಾನದ ದುಡಿಮೆಯಿಂದಾಗಿ 'ವಚನಸಾಹಿತ್ಯ'ದ ಸಂಶೋಧನೆ-ಪ್ರಕಟನೆ ಒಂದು ಹಂತಕ್ಕೆ ಬಂದು ನಿಂತಿದೆ ಎನ್ನಬಹುದು. ಇದೀಗ ಇಷ್ಟೇ ವಿಪುಲವಾಗಿರುವ ಇದಕ್ಕಿಂತ ಹೆಚ್ಚು ಜನಪ್ರಿಯವಾಗಿರುವ 'ಸ್ವರವಚನ'ಸಾಹಿತ್ಯದ ಸಂಶೋಧನೆ-ಪ್ರಕಟನೆ ವ್ಯಾಪಕವಾಗಿ, ವ್ಯವಸ್ಥಿತವಾಗಿ ನಡೆಯಬೇಕಾಗಿರುವುದು ಅಗತ್ಯವಾಗಿದೆ.

ಡಾ. ಫ.ಗು. ಹಳಕಟ್ಟಿಯವರು ಮೊದಲುಮಾಡಿ ಅನೇಕ ಜನ ವಿದ್ವಾಂಸರು ಈ ಸಾಹಿತ್ಯವನ್ನು ಆಗಾಗ ಪ್ರಕಟಿಸುತ್ತ ಬಂದರೂ, ಅದು ಬೆಳಕು ಕಂಡುದು ಕಡಿಮೆ. ಹೀಗಾಗಿ ಪ್ರಾಚೀನ ಹಸ್ತಪ್ರತಿಗಳಲ್ಲಿ, ಜನರ ಬಾಯಿಯಲ್ಲಿ ಬದುಕಿಬಂದ ಈ ಸಾಹಿತ್ಯ ಪ್ರಕಾರವನ್ನು ಒಮ್ಮೆ ಇಡಿಯಾಗಿ ಪ್ರಕಟಿಸಬೇಕಾಗಿದೆ. ಹಾಗೆ ಪ್ರಕಟವಾದರೆ ನಮ್ಮ ಹಾಡುಗಬ್ಬ ಪರಂಪರೆಗೆ ಇರುವ ಪ್ರಾಚೀನತೆಯನ್ನೂ ನಿರಂತರತೆಯನ್ನೂ ಎತ್ತಿ ತೋರಿಸಿದಂತಾಗುತ್ತದೆ. ಈ ಘನವಾದ ಉದ್ದೇಶವನ್ನು ಕಣ್ಣುಮುಂದಿಟ್ಟುಕೊಂಡು ಸ್ವರವಚನ ಸಾಹಿತ್ಯ ಪ್ರಕಟನ ಯೋಜನೆಯನ್ನು ಡಾ. ಎಂ.ಎಂ. ಕಲಬುರ್ಗಿಯರ ನಿರ್ದೇಶನದಲ್ಲಿ "ಶ್ರೀ ಶಿವರಾತ್ರೀಶ್ವರ ಧಾರ್ಮಿಕದತ್ತಿ" ಕೈಗೆತ್ತಿಕೊಂಡಿದೆ. ಈಗಾಗಲೇ ಡಾ. ಎಲ್. ಬಸವರಾಜು ಅವರು ಸಂಪಾದಿಸಿದ 'ಶಿವದಾಸಗೀತಾಂಜಲಿ'ಯನ್ನು ನಮ್ಮ ಜೆ.ಎಸ್.ಎಸ್. ಗ್ರಂಥಮಾಲೆಯಿಂದ ಪ್ರಕಟಿಸುವ ಮೂಲಕ ಈ ಸಾಹಿತ್ಯದ ಮಹತ್ವವನ್ನು ಪ್ರಥಮಬಾರಿಗೆ ಬೆಳಕಿಗೆ ತಂದ ನಾವು, ಅದರ ಮುಂದುವರಿಕೆಯೆಂಬಂತೆ ಈ ಯೋಜನೆಯನ್ನು ಹಮ್ಮಿಕೊಂಡಿದ್ದೇವೆ.

ಇಂಥ ಒಂದು ವ್ಯಾಪಕ ಯೋಜನೆಯ ಅನುಷ್ಠಾನಕ್ಕೆ ವಿದ್ವಾಂಸರ ನೆರವು ಅಗತ್ಯ. ಕರ್ನಾಟಕದ ಬೇರೆ ಬೇರೆ ಭಾಗಗಳ ವಿದ್ವಾಂಸರು ಈ ಕಾರ್ಯದಲ್ಲಿ ಸಹಕರಿಸಲು ಮುಂದೆ ಬಂದಿರುವುದು ಒಂದು ಶುಭಯೋಗ. ಇವರೆಲ್ಲರ ನೆರವಿನಿಂದ ಸ್ವರವಚನ ಸಾಹಿತ್ಯವನ್ನು

ಮೊದಲು ಬಿಡಿ ಸಂಪುಟಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಯೋಜನೆಯ ಫಲವಾಗಿ ಬೆಳಕಿಗೆ ಬರಲಿರುವ ಆವೃತ್ತಿಗಳನ್ನು, ಈಗಾಗಲೇ ಅನ್ಯರು ಪ್ರಕಟಿಸಿರುವ ಆವೃತ್ತಿಗಳನ್ನು ಕ್ರೋಢೀಕರಿಸಿ, ವ್ಯವಸ್ಥಿತವಾಗಿ ವರ್ಗೀಕರಿಸಿ, ಅದನ್ನು "ಸಮಗ್ರ ಸ್ವವರವಚನಸಾಹಿತ್ಯ ಪ್ರಕಟನ ಯೋಜನೆ" ಹೆಸರಿನಿಂದ ಸಂಪುಟ ಶ್ರೇಣಿಯಲ್ಲಿ ಹೊರತರಲು ಸಂಕಲ್ಪಿಸಲಾಗಿದೆ.

ಈ ಸಂಕಲ್ಪವು ಈಡೇರುವಂತಾಗಲೆಂದು ಆಶಿಸುತ್ತ, ಇದರಲ್ಲಿ ನೆರವಾದ ಎಲ್ಲರಿಗೂ ಸಕಲಶ್ರೇಯಸ್ಸನ್ನು ಹಾರೈಸುತ್ತೇವೆ.

ಜನವರಿ ೧೩, ೧೯೯೭ | ಶ್ರೀ ಶಿವರಾತ್ರಿದೇಶಿಕೇಂದ್ರ ಸ್ವಾಮಿಗಳು

# ಪ್ರಸ್ತಾವನೆ

ಪ್ರಸ್ತುತ ಕೃತಿಯಲ್ಲಿ ಸಮಾವೇಶಗೊಂಡಿರುವ ಒಟ್ಟು ಸ್ವರವಚನಗಳು ೨೯೬. ಇವುಗಳನ್ನು ಬರೆದವರು:

೧. 'ಚನ್ನಶ್ರೀಪ್ರಭು' ಅಂಕಿತದ ಚನ್ನಪ್ಪ ಕವಿ

೨. 'ಮಗಿಯ ನರೇಂದ್ರ' ಅಂಕಿತದ ಮಗೆಪ್ಪ ಕವಿ

೩. 'ಗುರುಬಸವ' ಅಂಕಿತದ ಗುರುಬಸವ ಕವಿ

೪. 'ಗುರುಚರಲಿಂಗ' ಅಂಕಿತದ ಚರಲಿಂಗ ಕವಿ

೫. ಬೇರೆ ಬೇರೆ ಅಂಕಿತದ ಇತರ ಕವಿಗಳು.

ಇವರೆಲ್ಲ ಚನ್ನಪ್ಪ ಕವಿಯು ರಚಿಸಿರುವ ಹಾಡುಗಳದೇ ಸಿಂಹಪಾಲು (೧೬೧). ತದನಂತರದ ಸ್ಥಾನ ಮಗೆಪ್ಪ ದೇಸಾಯಿಯ ಹಾಡುಗಳದು (೭೭). ಉಳಿದಂತೆ ಗುರುಬಸವಕವಿಯ ೧೫, ಚರಲಿಂಗ ಕವಿಯ ೧೦ ಮತ್ತು ಇತರ ಕವಿಗಳ ೩೩ ಹಾಡುಗಳು ಇಲ್ಲಿವೆ.

ಈ ಹಾಡುಗಳನ್ನು ಮೊತ್ತಮೊದಲು ಶೋಧಿಸಿ ಪ್ರಕಟಿಸಿದವರು, ಲಿಂ. ಬುದ್ಧಯ್ಯಸ್ವಾಮಿ ಪುರಾಣಿಕ. ಗ್ರಂಥಪ್ರಕಟನೆಗಾಗಿ ಅವರು ತಮ್ಮದೇ ಆದ `ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆಯನ್ನು ಆರಂಭಿಸಿ, ಅದರ ಮೂಲಕ ಒಟ್ಟು ಹನ್ನೆರಡು ಗ್ರಂಥಗಳನ್ನು ಅರವತ್ತೇಳು ಅರವತ್ತೆಂಟು ವರ್ಷಗಳಷ್ಟು ಹಿಂದೆ ಕ್ರಿ.ಶ. ೧೯೨೯ರಿಂದ ೧೯೩೧ರ ವರೆಗಿನ ಅವಧಿಯಲ್ಲಿ ಮೆಹರ್ಬಾನ್ ಶ್ರೀಮಂತ ಪಾಯಪ್ಪ (ಉರ್ಫ್ ಅಪ್ಪಾಸಾಹೇಬ) ಜಕ್ಕಪ್ಪ ದೇಸಾಯಿ ಪರಗಣೆ ತೇರದಾಳ ಠಾಣೆ ಹನಗಂಡಿ

ಅವರ ಉದಾರ ಧನಸಹಾಯದಿಂದ ಪ್ರಕಟಿಸಿದ್ದಾರೆ. ಅವುಗಳಲ್ಲಿ ಪುಷ್ಪ ೧, ೪, ೯ ಹಾಗೂ ೧೧ ಇವು ಸ್ವರವಚನಗಳನ್ನು ಒಳಗೊಂಡಿವೆ. ಇವುಗಳಲ್ಲಿಯ ಎಲ್ಲ ಹಾಡುಗಳು- ಕೆಲವನ್ನು ಮಾತ್ರ ಬಿಟ್ಟು- ತೇರದಾಳದ ಅಲ್ಲಮಪ್ರಭುವನ್ನು ಕುರಿತವಾಗಿವೆ.

ಮೊದಲನೆಯ ಪುಷ್ಪದ ಮುನ್ನುಡಿಯಲ್ಲಿ ಪುರಾಣಿಕರು ತೇರದಾಳದ ಅಲ್ಲಮಪ್ರಭುದೇವರ ಬೃಹನ್ಮಠದ ಸಂಕ್ಷಿಪ್ತ ಪರಿಚಯ ಮಾಡಿಕೊಟ್ಟು, ತದನಂತರ, ಆ ಮಠದ ಈಗಿನ ಒಡೆಯರೆಲ್ಲ, ಪ್ರಭುದೇವನಿಗೆ ಸಂಬಂಧಿಸಿದಂತೆ ಹಲವಾರು ಗ್ರಂಥಗಳಿರುವುದನ್ನು ಉಲ್ಲೇಖಿಸಿ, ಅದು ಪ್ರಕಟವಾಗದಿರುವುದಕ್ಕೆ ತಮ್ಮ ವಿಷಾದ ವ್ಯಕ್ತಪಡಿಸಿದ್ದಾರೆ. ಪ್ರಭುದೇವನನ್ನು ಕುರಿತು ಬೃಹದ್ಗ್ರಂಥಗಳಿರುವ ಜೊತೆಗೆ, ಅವನನ್ನು ಕುರಿತು ಹಲವಾರು ಕವಿಗಳು ಬರೆದ ಹಾಡುಗಳೂ ಪುರಾಣಿಕರಿಗೆ ಬೃಹನ್ಮಠದಲ್ಲಿ ದೊರೆತವಂತೆ. ಆ ಬಗ್ಗೆ ಅವರು, "ಇದು ಅಲ್ಲದೆ ಬೇರೆ ಬೇರೆ ಅನೇಕ ಕವಿಗಳು ಶ್ರೀ ಪ್ರಭುವನ್ನು ಪದ್ಯರೂಪದಿಂದ ಹೊಗಳಿದ ಅಸಂಖ್ಯಾತ ಕೃತಿಗಳು ಬೆಳಕಿಗೆ ಬಂದಿಲ್ಲ. ಇದನ್ನರಿತು ಕೈಲಾದ ಮಟ್ಟಿಗೆ ಈ ವಾಙ್ಮಯ ಸೇವೆಯನ್ನು ನಾವು ಮಾಡಬೇಕೆಂಬ ಸದುದ್ದೇಶದಿಂದ .................. ಎಷ್ಟೋ ಕವಿಗಳ ಅನೇಕ ಹಾಡುಗಳಲ್ಲಿ ೧. ಮಗಿಯನರೇಂದ್ರ ೨. ಚನ್ನಶ್ರೀ ಪ್ರಭು ೩. ಗುರುಬಸವ ಎಂಬ ಈ ಮೂರು ಮುದ್ರಿಕೆಗಳುಳ್ಳ ಕವಿಗಳ ಹಾಡುಗಳಂತೂ ನಮಗೆ ಬಹಳ ಪ್ರಾಸಾದಿಕವಾಗಿಯೂ, ಮತ್ತು ಹೃದಯಂಗಮವಾಗಿಯೂ ತೋರಿದವು ಮತ್ತು ಈ ಮೂವರಲ್ಲಿ ಪ್ರತಿಯೊಬ್ಬರೂ ೧೧೦೦ ಪದಗಳನ್ನು ರಚಿಸಿರುವರೆಂದು ಐತಿಹ್ಯವುಂಟು. ಸದ್ಯಕ್ಕೆ ಸಿಕ್ಕಷ್ಟು ಪದಗಳನ್ನೇ ಸಂಗ್ರಹಿಸಿ ಈ ಪುಷ್ಪಮಾಲೆಯಲ್ಲಿ ಶೇಖರಿಸಿರುವೆವು. ಉಳಿದವುಗಳನ್ನುಅನುಕೂಲತೆ ಪ್ರಕಾರ ಪ್ರಕಟಿಸುವೆವು" ಎಂದು ಹೇಳಿದ್ದಾರೆ. ತಮ್ಮ ಹೇಳಿಕೆಯ ಪ್ರಕಾರ ಪುರಾಣಿಕರು, ಪುಷ್ಪ ೪, ಪುಷ್ಪ ೯ ಮತ್ತು ಪುಷ್ಪ ೧೧ ಇವುಗಳಲ್ಲಿ ಆ ಹಾಡುಗಳನ್ನು ಪ್ರಕಟಿಸಿದ್ದಾರೆ. ಈ ನಾಲ್ಕು ಸಂಕಲನಗಳಲ್ಲಿ ಮೇಲೆ ಉಲ್ಲೇಖಿಸಿದ ಮೂವರು ಪ್ರಮುಖ ಕವಿಗಳ ಹಾಡುಗಳಲ್ಲದೆ, ಚರಲಿಂಗಕವಿ ಮತ್ತು ಬೇರೆ ಬೇರೆ ಅಂಕಿತದ ಕವಿಗಳ ಹಾಡುಗಳೂ ಸೇರ್ಪಡೆಗೊಂಡಿವೆ. ಹೀಗೆ ತಾವು ಸಂಕಲಿಸಿರುವ ಒಟ್ಟು ಹಾಡುಗಳ ಸಂಖ್ಯೆ ೨೯೭ ಎಂದು ಪುರಾಣಿಕರು ಹೇಳಿರುವುದಾದರೂ, ನಿಜವಾಗಿ ಆ ಸಂಖ್ಯೆ ೨೯೬.

ಈ ಹಾಡುಗಳನ್ನಲ್ಲದೆ, ಲಿಂ. ಬುದ್ಧಯ್ಯ ಪುರಾಣಿಕ ಅವರು 'ಶ್ರೀ ಪ್ರಭುದೇವರ ಸ್ತೋತ್ರ ಸಂಗ್ರಹ', 'ಶ್ರೀ ಪ್ರಭುದೇವರ ತ್ರಿವಿಧಿ', 'ಶ್ರೀ ಪ್ರಭುದೇವರ ಸಾಂಗತ್ಯ', 'ಶ್ರೀ

ಪ್ರಭುದೇವರ ನಟನ ತಾರಾವಳಿ', 'ಶ್ರೀ ಪ್ರಭುದೇವರ ಕೋಲು ಪದಗಳು', 'ಶ್ರೀ ಪ್ರಭುಲಿಂಗದ ಕಂದ' - ಮೊದಲಾದ ಕಿರು ಹೊತ್ತಿಗೆಗಳನ್ನೂ, ಎಳಂದೂರು ಹರೀಶ್ವರ ಕೃತ ಬೃಹತ್‌ಕೃತಿ ಶ್ರೀ ಪ್ರಭುದೇವರ ಪುರಾಣವನ್ನು ಪರಿಶೋಧಿಸಿ ಪ್ರಕಟಿಸಿರುವುದು ಗಮನೀಯ.

ಲಿಂ. ಪುರಾಣಿಕರು ಮ್ಯಾಟ್ರಿಕ್‌ವರೆಗೆ ಮಾತ್ರ ಓದಿದವರು. ಅದೂ ಮರಾಠಿಯಲ್ಲಿ. ಇಳಿ ವಯಸ್ಸಿನಲ್ಲಿ ಅವರು ಧಾರವಾಡಕ್ಕೆ ಬಂದಮೇಲೆ, ಲಿಂ. ಬಸವನಾಳರಂತಹ ಪ್ರಸಿದ್ಧ ಸಾಹಿತಿಗ್ಗಳ ಸಂಗದಲ್ಲಿ ಅವರು ಕನ್ನಡವನ್ನು ಆಳವಾಗಿ ಅಭ್ಯಸಿಸಿ, ಇಷ್ಟೊಂದು ಕೃತಿಗಳನ್ನು ಪರಿಶೋಧಿಸಿ ಪ್ರಕಟಿಸಿರುವುದು ಆ ಕಾಲದಲ್ಲಿ ಒಂದು ದೊಡ್ಡ ಸಾಹಸವೇ ಸರಿ. ಪುರಾಣಿಕರ ಹಲವಾರು ಸಂಶೋಧನಾತ್ಮಕ ಲೇಖನಗಳು 'ಶಿವಾನುಭವ', 'ಜಯ ಕರ್ನಾಟಕ', 'ಸಾಹಿತ್ಯ ಸಮಿತಿ ಪತ್ರಿಕೆ' ಹಾಗೂ 'ವೀರಶೈವ'ದಂತಹ ವಿದ್ವತ್ ಪತ್ರಿಕೆಗಳಲ್ಲಿ ಪ್ರಕಟಣೆಗೊಂಡಿವೆ. ಮರಾಠಿಯಲ್ಲಿ ಕೂಡ, ಇವರ ಒಂದೆರಡು ಗ್ರಂಥಗಳು ಮತ್ತು ಲೇಖನಗಳನ್ನು ಬರೆದಿದ್ದಾರೆ.

ತಾವು ಪರಿಶೋಧಿಸಿ ಪ್ರಕಟಿಸಿರುವ ಪ್ರತಿಯೊಂದು ಸ್ವರವಚನ ಸಂಕಲನದ ಆರಂಭದಲ್ಲಿ ಪುರಾಣಿಕರು, ಹಾಡುಗಳ ಬಗ್ಗೆ ಹಾಗೂ ಅವುಗಳ ರಚಕರ ಬಗ್ಗೆ ಒಂದೆರಡು ಮಾತುಗಳನ್ನು ಹೇಳಿದ್ದಾರೆ. ಅವುಗಳಲ್ಲಿ ಆ ಹಾಡುಗಳಿಗೆ ವಸ್ತುವಾಗಿರುವ ತೇರದಾಳದ ಅಲ್ಲಮಪ್ರಭು (ಮಗಿಯಪ್ರಭು)ಗಳ ಬಗೆಗಿನ ವಿವರಗಳೇ ಅಧಿಕವಾಗಿವೆ. ತೇರದಾಳದ ಅಲ್ಲಮಪ್ರಭುವಿನ ಬಗ್ಗೆ ಅವರ ಅಭಿಪ್ರಾಯಗಳ ಒಟ್ಟು ಸಾರಾಂಶ ಹೀಗಿದೆ:-

ಪುರಾಣಿಕರ ಅಭಿಪ್ರಾಯದ ಪ್ರಕಾರ ತೇರದಾಳದ ಬೃಹನ್ಮಠದಲ್ಲಿರುವ ಗದ್ದುಗೆ ಹನ್ನೆರಡನೆಯ ಶತಮಾನದ ಬಸವಾದಿಗಳ ಕಾಲದ ಅಲ್ಲಮಪ್ರಭುದೇವರ ಗದ್ದುಗೆ. ತಮ್ಮ ಅಭಿಪ್ರಾಯವನ್ನು ಅವರು ಕೆಲವು ಬಾಹ್ಯ ಮತ್ತು ಆಂತರಿಕ ಆಧಾರಗಳ ಸಹಾಯದಿಂದ ಸಮರ್ಥಿಸಲು ಪ್ರಯತ್ನಿಸಿದ್ದಾರೆ.

ಅವರಿಗಿರುವ ಮುಖ್ಯ ಬಾಹ್ಯ ಆಧಾರ 'ನಿರಂಜನ ವಂಶರತ್ನಾಕರ'. ಅದರಲ್ಲಿ ಬರುವ ತೋಂಟದ ಸಿದ್ಧಲಿಂಗ ಯತಿಗಳ ಗುರು ಪರಂಪರೆಯಲ್ಲಿ ಬಸವಪ್ರಭು ಎಂಬವರು ಒಂಬತ್ತನೆಯವರಾಗಿದ್ದಾರೆ. ಸ್ವತಃ ಸಿದ್ಧಲಿಂಗೇಶ್ವರರು ತಮ್ಮ ಒಂದು ವಚನದಲ್ಲಿ ತಮ್ಮ ಗುರುಪರಂಪರೆಯನ್ನು ಹೇಳಿದ್ದು ಅದರಲ್ಲಿಯೂ ಬಸವಪ್ರಭುಗಳು ಒಂಬತ್ತನೆಯವರೇ

ಆಗಿದ್ದಾರೆ. ಈ ಬಸವಪ್ರಭುಗಳನ್ನು ಕುರಿತು ನಿರಂಜನ ವಂಶರತ್ನಾಕರ ಕೆಲವು ವಿಷಯಗಳನ್ನು ತಿಳಿಸುತ್ತದೆ:

"ಬಸವ ಪ್ರಭುಗಳು ಕೆಳದಿ ಪ್ರಾಂತದಲ್ಲಿ ಅನೇಕರಿಗೆ ವೀರಶೈವೋಪದೇಶಗೈಯುತ್ತ, ಹಿರೇಸೂರು ಕಿರೇಸೂರುಗಳ ಮೂಲಕ ಹುಕ್ಕೇರಿ ನಾಡಿಗೆ ದಯಮಾಡಿಸುತ್ತಾರೆ. ಅಲ್ಲಿ ಪರಮತೀಯರನ್ನು ವಾದದಲ್ಲಿ ಪರಾಭವಗೊಳಿಸಿ, ಅವರನ್ನು ವೀರಶೈವರನ್ನಾಗಿ ಮಾಡುತ್ತಾರೆ. ಅಲ್ಲಿಂದ ಹನಗಂಡಿಗೆ ಬಂದು ಅಲ್ಲಿಯ ಜೈನ ಅರಸನಿಗೆ ಲಿಂಗದೀಕ್ಷೆ ಮಾಡಿಸಿ ತೇರದಾಳಿಗೆ ಬರುತ್ತಾರೆ. ಕೆಲವು ದಿನಗಳಾದ ಮೇಲೆ ಅಲ್ಲಿಯ ಭಕ್ತಗಣದ ಸಮಕ್ಷಮದಲ್ಲಿ ತಮ್ಮ ಶಿವಾನುಭವ ಚರಂತಿಗೆ, ಎಪ್ಪತ್ತೆರಡು ಬಿರುದು ಹಾಗೂ ಗಣಸಮೂಹವನ್ನು ಅನಾದಿಲಿಂಗೇಶನೆಂಬ ಗಣವರನಿಗೆ ಒಪ್ಪಿಸಿ, ಧರ್ಮ ಪ್ರಸಾರ ಮಾಡುತ್ತ ಮುಂದೆ ಹೋಗುವಂತೆ ಅವರಿಗೆ ತಿಳಿಸಿ, ತಾವು ತೇರದಾಳದಲ್ಲಿಯೇ ಉಳಿಯುತ್ತಾರೆ. ಕೆಲವು ದಿನಗಳಾದ ಮೇಲೆ ತಾವು ನಿರವಯಲಾಗುವ ಬಗ್ಗೆ ತಮ್ಮ ಭಕ್ತರಿಗೆ ಅವರೇ ತಮ್ಮ ವಂಶಜದ ಪೂರ್ವಜರೆಂದು, ಪುರಾಣಿಕರು ಹೇಳುತ್ತಾರೆ.ಆಗ ಅವರು ತಮಗೆ ಯಾವುದಾದರೂ ಕುರುಹನ್ನು ದಯಪಾಲಿಸಬೇಕೆಂದೂ, ಅದನ್ನು ವಂಶಪಾರಂಪರ್ಯ ಪೂಜಿಸುತ್ತ ಕೃತಾರ್ಥರಾಗುವೆವೆಂದೂ ಬೇಡಿಕೊಳ್ಳುತ್ತಾರೆ. ಆಗ ಬಸವಪ್ರಭುಸ್ವಾಮಿಗಳು ತಮ್ಮ ಕಮಂಡಲುವಾದ ಮಗಿಯನ್ನೂ, ಪಾವುಗೆ, ಬೆತ್ತಗಳನ್ನು ಕೊಟ್ಟು ಆಶೀರ್ವದಿಸಿ ಬಯಲಾಗುತ್ತಾರೆ. ಆ ಸ್ಥಳದಲ್ಲಿ ಭಕ್ತರು ಒಂದು ಮಠ ಕಟ್ಟಿಸಿ, ಶೂನ್ಯ ಪೀಠಗದ್ದುಗೆಯನ್ನು ನಿರ್ಮಿಸಿ ಅದರ ಮೇಲೆ ಮಗಿ, ಬೆತ್ತ, ಪಾವುಗೆಗಳನ್ನಿರಿಸಿ ಇಂದಿನವರೆಗೂ ಪೂಜಿಸುತ್ತ ಬಂದಿದ್ದಾರೆ. ಬಸವಪ್ರಭು ಹೆಸರಿನಿಂದ ಮಗಿಯನ್ನು ಪೂಜಿಸುತ್ತಿರುವುದರಿಂದ 'ಮಗಿಪ್ರಭು' ಎಂಬ ರೂಢನಾಮ ಬಂದಿದೆ. ಇದಕ್ಕೆ ಸ್ಥಳ ಪುರಾಣವೆ ಸಾಕ್ಷಿ ಎಂದು ಅದರಲ್ಲಿ ಹೇಳಲಾಗಿದೆ.

ಸ್ಥಲ ಪುರಾಣವನ್ನಾಧರಿಸಿದ ನಿರಂಜನ ವಂಶ ರತ್ನಾಕರದ ಈ ಹೇಳಿಕೆಯ ಪ್ರಕಾರ ಈಗ ತೇರದಾಳದಲ್ಲಿರುವುದು ಬಸವಪ್ರಭು ಸ್ವಾಮಿಗಳ ಗದ್ದುಗೆ. ಪುರಾಣಿಕರು ಇದು ಮೂಲ ಅಲ್ಲಮ ಪ್ರಭುವಿನ ಗದ್ದುಗೆ ಎಂಬುದನ್ನು ಸ್ಥಾಪಿಸಲು, ತಾವು ಪ್ರಕಟಿಸಿರುವ ಹಾಡುಗಳಲ್ಲಿ ಬರುವ ಕೆಲವು ಉಲ್ಲೇಖಗಳನ್ನು ಆಂತರಿಕ ಆಧಾರವಾಗಿ ಕೊಡುತ್ತಾರೆ.

"ಜೊ ಜೋ ಎನ್ನಿ ಅಸಮ ಅಲ್ಲಮಗೆ। ಜೊ ಜೋ ಎನ್ನಿ ಬಸವಪ್ರಭುವಿಗೆ" ಎಂದು ಆರಂಭವಾಗುವ ಮಗಪ್ಪದೇಸಾಯಿಯ ಜೋಗುಳದ ಹಾಡಿನಲ್ಲಿ, ಬಸವಪ್ರಭು

ಮತ್ತು ಅಲ್ಲಮಪ್ರಭುಗಳಲ್ಲಿ ಅಭೇದ ಕಲ್ಪಿಸಿರುವುದನ್ನು ಪುರಾಣಿಕರು ಎತ್ತಿ ತೋರಿಸುತ್ತಾರೆ. "ಆರು ಅರಿಯರಲ್ಲ ಈ ಲಿಂಗವ ಮತ್ತಾರು ಅರಿಯರಲ್ಲ" ಎಂದು ಮೊದಲಾಗುವ 'ತ್ರಿಪುರಾಂತಕಲಿಂಗ' ಅಂಕಿತದ ಒಂದು ಹಾಡಿನಲ್ಲಿ ಕೊನೆಗೆ "ಆದಿ ಪ್ರಸಾದವ ಭೇದಿಸಬಲ್ಲರೆ ಬಸವಪ್ರಭುಗಲ್ಲದೆ" ಎಂದು ಉಲ್ಲೇಖಿಸಲಾಗಿದೆ. ಹೆಸರು ತಿಳಿಯದ ಇನ್ನೊಬ್ಬ ಕವಿ "ವರ ಬಸವಪ್ರಭುವಿನ ಧ್ಯಾನ ಮಾಡೊ ಬಿಡದೆ" ಎಂದು ತನ್ನ ಹಾಡಿನಲ್ಲಿ ಹೇಳಿದ್ದಾನೆ. ಇದರಿಂದ ಮಗಿಪ್ರಭು, ಬಸವಪ್ರಭು ಇವು ಪರ್ಯಾಯ ನಾಮಗಳೆಂದು ಹೇಳುವ ಪುರಾಣಿಕರು, ಇದಕ್ಕೆ ಇನ್ನೂ ಕೆಲವು ಆಧಾರಗಳನ್ನು ಒದಗಿಸಿದ್ದಾರೆ.

ಇನ್ನು ತೇರದಾಳದ ಮಗಿಪ್ರಭುವಿಗೆ ಮೂಲ ಅಲ್ಲಮ ಪ್ರಭುವಿನ ಬಿರುದುಗಳನ್ನು ಅವನ ಜೀವನದ ಕೆಲವು ಘಟನೆಗಳನ್ನು ಆರೋಪಿಸಿ, ಕೆಲವು ಕವಿಗಳು ಹಾಡುಗಳನ್ನು ಬರೆದಿದ್ದಾರೆ. ಮಗೆಪ್ಪ ಕವಿ ತನ್ನ ಒಂದು ಹಾಡಿನಲ್ಲಿ ಮಗಿಯ ಪ್ರಭುವನ್ನು "ಮಾಯಾ ಕೋಳಾಹಳ" ಎಂದು ಕರೆದಿದ್ದಾನೆ. "ಮುದ್ದು ಮುಖದ ಮಗಿಯ ಪ್ರಭುವೆ" ಎಂದು ಆರಂಭವಾಗುವ ಅವನ ಇನ್ನೊಂದು ಹಾಡಿನಲ್ಲಿ, ಮಗಿಯ ಪ್ರಭುವನ್ನು "ಆದಿ ಅಲ್ಲಮ" ಎಂದು ಕರೆದಿರುವ ಜೊತೆಗೆ, ಸುಜ್ಞಾನಿ ನಿರಹಂಕಾರಿಗಳಿಗೆ ಅಲ್ಲಮನು ಒಲಿದು ಬಂದುದನ್ನು, ಬನವಾಸಿಗೆ ಹೋಗಿ ಮಾಯೆಯನ್ನು ಸೋಲಿಸಿದುದನ್ನು, ಗೊಗ್ಗಯ್ಯನಿಗೆ ಕರುಣಿಸಿ, ಸಿದ್ಧರಾಮನ ಗರ್ವಭಂಗ ಮಾಡಿ ಕಲ್ಯಾಣಕ್ಕೆ ಹೋದುದನ್ನು ತಿಳಿಸುತ್ತ, ಆ ಪ್ರಭುವೇ ತ್ರಿದಳಪುರ (ತೇರದಾಳ)ದಲ್ಲಿ ಬಂದು ನಿಂತಿರುವನೆಂದು ಬಣ್ಣಿಸಿದ್ದಾನೆ. ಈ ಬಗೆಯ ವರ್ಣನೆ ಮಗೆಪ್ಪಕವಿಯ ಇನ್ನು ಕೆಲವು ಹಾಡುಗಳಲ್ಲಿ ಬರುತ್ತದೆ. "ಅಲಸದರ್ಚಿಸು ಪ್ರಭುಲಿಂಗನ" ಎಂದು ಆರಂಭವಾಗುವ ಚನ್ನಪ್ಪ ಕವಿಯ ಹಾಡಿನಲ್ಲಿಯೂ ಆದಿ ಅಲ್ಲಮನ ಚಾರಿತ್ರಿಕ ಘಟನೆಗಳನ್ನು, ತೇರದಾಳದ ಮಗಿಯ ಪ್ರಭುವಿಗೆ ಆರೋಪಿಸಿರುವುದನ್ನು ಕಾಣುತ್ತೇವೆ. ಇತರ ಕವಿಗಳ ಕೆಲವು ಹಾಡುಗಳಲ್ಲಿಯೂ ಈ ಬಗೆಯ ವರ್ಣನೆ ಬಂದಿದೆ. ಈ ಆಂತರಿಕ ಆಧಾರಗಳ ಹಿನ್ನೆಲೆಯಲ್ಲಿ ಬಸವಪ್ರಭು=ಮಗಿಪ್ರಭು=ಅಲ್ಲಮಪ್ರಭು (ಮೂಲ) ಎಂದು ಪುರಾಣಿಕರು ಸಾಧಿಸುತ್ತಾರೆ.

ಪುರಾಣಿಕರ ಈ ವಾದವನ್ನು ಒಪ್ಪುವದು ಕಷ್ಟ. ತೇರದಾಳದ ಮಗಿಪ್ರಭುವನ್ನು ತಮ್ಮ ಪರಮಾರಾಧ್ಯದೈವವೆಂದು ಗಟ್ಟಿಯಾಗಿ ನಂಬಿ ಅವನ ಅನನ್ಯ ಭಕ್ತರಾಗಿರುವ ಈ ಕವಿಗಳು, ಆತನ ಮೇಲಿನ ಭಕ್ತ್ಯಾಧಿಕ್ಯದಿಂದ ಮೂಲ ಅಲ್ಲಮನ ಮಹತ್ವವನ್ನು

ತೇರದಾಳದ ಮಗಿಯಪ್ರಭುವಿನಲ್ಲಿ ಆರೋಪಿಸಿ ಸ್ತುತಿಸಿರುವ ಸಾಧ್ಯತೆಯಿದೆ. "ಪರಮ ವೀರಶೈವದೊಳು ಮನಗಂಭೀರ", "ಪರಮ ಷಟ್‌ಸ್ಥಲ ಸಂಪನ್ನ", "ಬಸವ ಸಂಪ್ರೀತ" ಮುಂತಾಗಿ ಚನ್ನಪ್ಪ ಕವಿ, ಮಗಿಯಪ್ರಭುವನ್ನು ಹೊಗಳಿದ್ದರೆ, ಮಗೆಪ್ಪಕವಿ "ಕರಸ್ಥಲದ ದೇವ" ಎಂದು ಕರೆದಿರುವ ಜೊತೆಗೆ "ಶಂಕರನ ಅವತಾರ", ಎಂದೂ ವಿಶೇಷಿಸಿದ್ದಾನೆ. ಶಿವನಿಗೆ ಅನ್ವಯಿಸುವ ವಿಶೇಷಣಗಳನ್ನು ಆತನು ಮಗೆಯ ಪ್ರಭುವಿಗೂ ಅನ್ವಯಿಸಿ ನಾನಾ ವಿಧವಾಗಿ ಪ್ರಾರ್ಥಿಸಿರುವುದನ್ನು ನಾವು ಆತನ ಹಾಡಿನಲ್ಲಿ ಕಾಣುತ್ತೇವೆ. ಮಗೆಪ್ಪ ಕವಿಗೆ ತೇರದಾಳದ ಮಗಿಯಪ್ರಭುವಿನ ಬಗೆಗಿದ್ದ ಅಪಾರ ಭಕ್ತಿಯನ್ನು ಇದು ಸೂಚಿಸುತ್ತದೆ. ಗುರುಬಸವಕವಿ ಮಗಿಯಪ್ರಭುವನ್ನು "ಯತಿರಾಯ, ಅವ ನಮ್ಮ ಬೋಧದಲ್ಲಮ" ಎಂದು ಸ್ತುತಿಸಿದ್ದಾನೆ. ಹೀಗೆ ಈ ಕವಿಗಳು ಮಗಿಯಪ್ರಭುವನ್ನು ಮೂಲ ಅಲ್ಲಮಪ್ರಭುವೆಂದು ಭಾವಿಸಿ ಸ್ತುತಿಸಿರುವುದಕ್ಕೆ ಮಗಿಯಪ್ರಭುವಿನ ಬಗ್ಗೆ ಅವರಿಗಿರುವ ಉತ್ಕಟ ಭಕ್ತಿಯ ಜೊತೆಗೆ ಮಗಿಯಪ್ರಭು ಮೂಲ ಅಲ್ಲಮ ಪ್ರಭುವಿನ ಸಂಪ್ರದಾಯದವನಾಗಿರುವುದೂ ಕಾರಣವಾಗಿರಬೇಕೆನಿಸುತ್ತದೆ.

ಮೂಲ ಅಲ್ಲಮಪ್ರಭುವಿಗೆ 'ಮಗಿಯಪ್ರಭು' ಹೆಸರಿದ್ದ ಬಗ್ಗೆ ಯಾವ ವೀರಶೈವ ಕೃತಿಗಳಲ್ಲೂ ಬಂದಿಲ್ಲ. ವೀರಶೈವ ಕೃತಿಗಳಲ್ಲಿ ಮೂಲ ಪ್ರಭುದೇವ ಶ್ರೀಶೈಲದಲ್ಲಿ ಐಕ್ಯನಾದನೆಂದು ಹೇಳುತ್ತವೆಯೆ ವಿನಾ ಎಲ್ಲಿಯೂ ಆತನು ತೇರದಾಳದಲ್ಲಿ ಐಕ್ಯನಾದ ಬಗ್ಗೆ ಉಲ್ಲೇಖವಿಲ್ಲ. ಆದ್ದರಿಂದ ತೇರದಾಳದಲ್ಲಿರುವ ಗದ್ದುಗೆ ಮೂಲ ಅಲ್ಲಮಪ್ರಭುವಿನ ಗದ್ದುಗೆ ಆಗಲಾರದು. ಮತ್ತು ತೇರದಾಳದ ಮಗಿಯ ಪ್ರಭು ಮೂಲ ಅಲ್ಲಮಪ್ರಭುವೂ ಆಗಲಾರ.

ಇನ್ನು ಬಸವಪ್ರಭು ಮತ್ತು ಮೂಲ ಅಲ್ಲಮಪ್ರಭು ಇಬ್ಬರೂ ಬೇರೆ ಬೇರೆಯಲ್ಲ ಒಬ್ಬನೇ ವ್ಯಕ್ತಿ ಎಂಬ ಪುರಾಣಿಕರ ಅಭಿಪ್ರಾಯ ಕೂಡ ಒಪ್ಪಿತವಾಗದು. ನಿರಂಜನ ವಂಶರತ್ನಾಕರದ ಪ್ರಕಾರ ಬಸವಪ್ರಭುಸ್ವಾಮಿಯ ಗುರು ರುದ್ರಗಣೇಶ್ವರ (ರುದ್ರಮುನಿಸ್ವಾಮಿ) ಅಥವಾ ತಿಪ್ಪೇರುದ್ರಸ್ವಾಮಿ. ಆದರೆ ಮೂಲ ಅಲ್ಲಮಪ್ರಭುವಿನ ಗುರು ಅನಿಮಿಷದೇವ. ಮೂಲ ಅಲ್ಲಮ ಬಯಲಾದದ್ದು ಮೇಲೆ ಹೇಳಿದಂತೆ ಶ್ರೀಶೈಲದಲ್ಲಿ. ಬಸವಪ್ರಭು ಬಯಲಾದದ್ದು ತೇರದಾಳದಲ್ಲಿ.

ತೋಂಟದ ಸಿದ್ಧಲಿಂಗಯತಿಗಳ ಗುರು ಪರಂಪರೆಯಲ್ಲಿ ಐದನೆಯವರಾದ ಜ್ಞಾನಾನಂದಸ್ವಾಮಿಗಳು, ಕಲ್ಯಾಣದಲ್ಲಿ ಜೀರ್ಣವಾದ ಪ್ರಭುದೇವರ ಮಠ ಕಟ್ಟಿಸಿ

ಶೂನ್ಯಪೀಠ ಸ್ಥಾಪಿಸಿದರೆಂದು ನಿರಂಜನ ವಂಶರತ್ನಾಕರ ಹೇಳುತ್ತದೆ. ಇದರಿಂದ ಅಲ್ಲಮಪ್ರಭು ಜ್ಞಾನಾನಂದ ಸ್ವಾಮಿಗಳಿಗಿಂತ ಹಿಂದೆ ಇದ್ದುದು ಸ್ಪಷ್ಟವಾಗುತ್ತದೆ. ಜ್ಞಾನಾನಂದಸ್ವಾಮಿಗಳ ಅನಂತರ ಬರುವ ಬಸವಪ್ರಭುಸ್ವಾಮಿಗಳು ಮೂಲ ಅಲ್ಲಮನಾಗಲು ಸಾಧ್ಯವಿಲ್ಲ. ಆದುದರಿಂದ ತೇರದಾಳದ ಬೃಹನ್ಮಠದಲ್ಲಿರುವ ಗದ್ದುಗೆ ಬಸವಪ್ರಭುಗಳ ಗದ್ದುಗೆ ಆಗಬಹುದೇ ವಿನಾ ಮೂಲ ಅಲ್ಲಮನದಾಗಲಾರದು.

ಇನ್ನು ಲಿಂ. ಪುರಾಣಿಕರು ಪ್ರಕಟಿಸಿರುವ ಇಲ್ಲಿಯ ಹಾಡುಗಳಲ್ಲಿ ಮಗಿಯಪ್ರಭುವಿಗೆ ಸಂಬಂಧಿಸಿದಂತೆ ಉಲ್ಲೇಖಗೊಂಡಿರುವ ಕೆಲವು ಚಾರಿತ್ರಿಕ ಸಂಗತಿಗಳನ್ನು ಪರಿಶೀಲಿಸಬೇಕು.

ಚನ್ನಪ್ಪಕವಿಯ "ಮುತ್ತಿನಾರತಿ ಎತ್ತಿ ಬೆಳಗಿರಿ" ಎಂದು ಆರಂಭವಾಗುವ ಒಂದು ಹಾಡಿನಲ್ಲಿ ಮಗಿಯಪ್ರಭು "ವೀರಧೀರ ಕೃಷ್ಣೇಂದ್ರ ಸತಿಗೆ ವರವ ಕೊಟ್ಟ" ಎಂಬ ಮಾತು ಬರುತ್ತದೆ. ಅವನದೇ ಆದ "ಶ್ರೀಗುರು ಮಾಡಿದ ಅಗಣಿತ ಕರುಣೆ ತಿಳಿಯದು" ಎಂದು ಮೊದಲಾಗುವ ಇನ್ನೊಂದು ಹಾಡಿನಲ್ಲಿ "ಹಿಂದೆ ಕೃಷ್ಣಗೊಂಡನು ಪಾಥ ತಾ ಬಂದಿಖಾನೆಯೊಳಿಡಲು, ದಯದಿಂದ ಅಶ್ವವನೇರಿಸಿ ಘಾಥನೊಲಿಸಿದಂಥ ಮಹಿಮನಿವನು" ಎಂದು ಹೇಳಲಾಗಿದೆ. ಇಲ್ಲಿ ಉಲ್ಲೇಖಗೊಂಡಿರುವ ಕೃಷ್ಣನರೇಂದ್ರ ಅಥವಾ ಕೃಷ್ಣಗೊಂಡ ನಿರಂಜನ ರತ್ನಾಕರ ಹೇಳುವ ಬಸವಪ್ರಭುಸ್ವಾಮಿಗಳಿಂದ ದೀಕ್ಷೆ ಪಡೆದ ಹನಗಂಡಿಯ ಜೈನ ಅರಸನಾಗಿರಬೇಕೆಂದು ಪುರಾಣಿಕರು ಊಹಿಸುತ್ತಾರೆ. ಇನ್ನೂ ಮುಂದುವರಿದು ಕಲ್ಯಾಣ ಚಾಳುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ (ಕ್ರಿ.ಶ. ೧೦೭೬-೧೧೨೬) ಶಾಸನೋಕ್ತ ಮಂಡಲೇಶ್ವರ ಜೈನ ಗೊಂಕರಸನು ಈ ಕೃಷ್ಣಗೊಂಡನ ಪೂರ್ವಜನಾಗಿರಬೇಕೆಂದೂ, ಮಗೆಪ್ಪಕವಿ ಈ ಕೃಷ್ಣಗೊಂಡನ ವಂಶದವನಾಗಿರಬೇಕೆಂದೂ, ಮಗೆಪ್ಪಕವಿಯ ಅನಂತರ ಆ ಮನೆತನದ ಯಾರೋ ಒಬ್ಬರು ಯಾವುದೋ ಕಾಲದಲ್ಲಿ ಮತ್ತೆ ಜೈನಧರ್ಮ ಸ್ವೀಕರಿಸಿದ ಕಾರಣವಾಗಿ ಈಗ ಹನಗಂಡಿಯ ದೇಸಾಯರು ಜೈನರಾಗಿರುವರಾದರೂ ಅವರು ತೇರದಾಳ ಪ್ರಭುವಿನ ಬಗ್ಗೆ ಇವತ್ತಿನವರೆಗೂ ಅಪಾರ ಭಕ್ತಿ ಇರಿಸಿಕೊಂಡಿರುವರೆಂದೂ ಹೇಳುತ್ತಾರೆ. ಪುರಾಣಿಕರ ಈ ಬಗೆಯ ಹೇಳಿಕೆ ದೂರಾನ್ವಯ ಸ್ವರೂಪದ್ದಾಗಿದ್ದು ಗಟ್ಟಿ ಆಧಾರಗಳನ್ನು ಬಯಸುತ್ತದೆ.

ಇನ್ನು ನಿರಂಜನ ವಂಶರತ್ನಾಕರ ಬಸವಪ್ರಭುಸ್ವಾಮಿಗಳು ಹನಗಂಡಿಯ ಜೈನ ಅರಸನಿಗೆ ಲಿಂಗದೀಕ್ಷೆ ಮಾಡಿಸಿದ್ದನ್ನು ಹೇಳುತ್ತದಾದರೂ ಅರಸನ ಹೆಸರಿಲ್ಲ.

ಚನ್ನಪ್ಪಕವಿಯ ಹಾಡಿನಲ್ಲಿ ಕೃಷ್ಣೇಂದ್ರನ ಸತಿಗೆ ಮಗಿಯಪ್ರಭು ವರವಿತ್ತಿರುವದಾಗಿ ಬರುತ್ತದೆ. ವರ ಕೊಡುವುದೆಂದರೆ ಲಿಂಗದೀಕ್ಷೆ ಕೊಡುವುದೆಂದು ಇಟ್ಟುಕೊಂಡರೂ ದೀಕ್ಷೆ ಪಡೆದವಳು ಕೃಷ್ಣೇಂದ್ರನ ಸತಿಯೇ (ಸತಿಯ ಹೆಸರು ಹೇಳಿಲ್ಲ) ವಿನಾ ಕೃಷ್ಣೇಂದ್ರನಲ್ಲ. ಒಂದು ವೇಳೆ ಕೃಷ್ಣೇಂದ್ರನೇ ಲಿಂಗದೀಕ್ಷೆ ಪಡೆದಿದ್ದರೆ ಅಂತಹ ಮುಖ್ಯ ವಿಷಯವನ್ನು ಚನ್ನಪ್ಪಕವಿ ಹೇಳದೆ ಬಿಡುತ್ತಿರಲಿಲ್ಲ. ಆದರೆ ಕೃಷ್ಣೇಂದ್ರನಿಗೆ ಆಪತ್ಕಾಲದಲ್ಲಿ ಮಗಿಯಪ್ರಭುವಿನಿಂದ ಸಹಾಯ ದೊರೆತಿರುವುದು ನಿಜ. ಅದು ಚನ್ನಪ್ಪಕವಿಯ ಹಾಡಿನಲ್ಲಿ ಸ್ಪಷ್ಟವಾಗಿ ಬಂದಿದೆ. ಹೀಗೆ ಮಗಿಯಪ್ರಭು ತನ್ನ ಪ್ರಭಾವದಿಂದ ಕೃಷ್ಣೇಂದ್ರನಿಗೆ ಪಾಥಾನಿಂದುಂಟಾದ ತೊಂದರೆಯನ್ನು ದೂರ ಮಾಡಿದುದಕ್ಕೆ, ಅವರ ಮೇಲೆ ಭಕ್ತಿಯುಂಟಾಗಿ ಕೃಷ್ಣೇಂದ್ರ ಲಿಂಗದೀಕ್ಷೆ ಪಡೆದಿರಬಹುದಾಗಿದೆ.

ಮೇಲೆ ಉದ್ಧರಿಸಿದ ಚನ್ನಪ್ಪನ ಆ ಹಾಡಿನಲ್ಲಿ ಗೋಕಾವಿಯ ಸಿದ್ಧರಾಮನು, ಕದನದಲ್ಲಿ ಪಾಸಪ್ಪನನ್ನು ಮುತ್ತಿ, ಅವನನ್ನು ಹಿಡಿದುಕೊಂಡು ಹೋಗುತ್ತಿರುವಾಗ ಮಗಿಯಪ್ರಭು ತನ್ನ ಶಕ್ತಿಯಿಂದ ಪಾಸಪ್ಪನನ್ನು ಗೆಲಿಸಿದಂತೆ ಹೇಳಿದೆ. ಈ ಪಾಸಪ್ಪ ಮತ್ತು ಗೋಕಾವಿಯ ಸಿದ್ಧರಾಮ ಯಾರು? ಅವರಲ್ಲಿ ಕದನವೇಕಾಯಿತು ತಿಳಿಯದು.

ಚನ್ನಪ್ಪ ಕವಿಯ ಅದೇ ಹಾಡಿನಲ್ಲಿ ಚನ್ನಿಗ ಅಲ್ಲಪ್ಪನನ್ನು ಅನ್ಯರು ಕೂಡಿ ಮಿರಜಿಯಲ್ಲಿಟ್ಟಾಗ, ಅವನಿಗೆ ಹೊಸ ಶಿರಪೇಚು, ಸಿಕ್ಕೆ ಕೊಡಿಸಿದಂತೆ ಅರ್ಥ ಬರುವ ಮಾತುಗಳಿವೆ (ಹಾಡಿನ ಈ ಭಾಗದ ಅರ್ಥ ಅಸ್ಪಷ್ಟ). ಅಲ್ಲದೆ ಹೆಸರು ತಿಳಿಯದ ಕವಿಯ ಒಂದು ಹಾಡು "ಶ್ರೀರಂಜಿತ ಸುಖ ಸಾರ ಪರಾತ್ಪರ" ಎಂದು ಆರಂಭವಾಗುತ್ತಿದ್ದು ಅದರಲ್ಲಿ ಜಗದ್ವಿಖ್ಯಾತ ತೇರದಾಳದಲ್ಲಿ ಮೆರೆವ ಅಲ್ಲೇಂದ್ರ ಸಂತತಿಯನ್ನು ತೇರದಾಳ ಪ್ರಭು ರಕ್ಷಿಸಿದ ಉಲ್ಲೇಖ ಬರುತ್ತದೆ. 'ಗುರು ಸಂಗಮೇಶ' ಅಂಕಿತದ ಕವಿಯೊಬ್ಬನ "ಶ್ರೀ ಪ್ರಭುವಿಗೊಂದಾರತಿ ಬೆಳಗುವೆನು" ಎಂದು ಆರಂಭವಾಗುವ ಹಾಡಿನಲ್ಲಿ "ಸುಂದರ ಲಖಿಮೇಂದ್ರನ ಆಲಯದಿ ಚಂದದಿ ಬಂದು ರಕ್ಷಿಸು" ಎಂದೂ, "ಅಗಲಿ ಜೀವಿಸಲಾರೆನೆ ನಗೆಮೊಗದಲ್ಲಮನ" ಎಂದು ಮೊದಲಾಗುವ ಹೆಸರು ತಿಳಿಯದ ಕವಿಯೊಬ್ಬನ ಇನ್ನೊಂದು ಹಾಡಿನಲ್ಲಿ "ಲಖಿಮೇಂದ್ರವರದ" ಎಂದು ಬರುತ್ತದೆ. ಈ ಅಲ್ಲೇಂದ್ರ ಲಖಿಮೇಂದ್ರ ಇವರು ಮಂಟಮುರಿ ದೇಸಾಯಿಯರ ಪೂರ್ವಜರೆಂದು ಪುರಾಣಿಕರು ಸರಿಯಾಗಿಯೇ ಊಹಿಸಿದ್ದಾರೆ. ಮಂಟವಮುರಿ ದೇಸಾಯರು ತೇರದಾಳದ ಮಗಿಯಪ್ರಭುವಿನ ಪರಮ ಭಕ್ತರು.

ಮಗೆಪ್ಪ ಕವಿಯಂತೂ, ಮಗಿಯಪ್ರಭುವನ್ನು ತನ್ನ ಅನೇಕ ಹಾಡುಗಳಲ್ಲಿ "ಮಗಿಯನರೇಂದ್ರಗೆ ದಯವಿತ್ತ", "ಮಗಿಯ ನರೇಂದ್ರಗೆ ಸುಗುಣಕೃಪೆಯಿತ್ತ", "ಮಗಿಯ ನರೇಂದ್ರಗೆ ವರವಿತ್ತಧಿಕ", "ಅಷ್ಟ ತೀರ್ಥ ಪ್ರಸಾದವ .......... ಎಚ್ಚರಿಕೆಯಲಿ ಸೇವಿಸಿ ........... ತೃಪ್ತಿ ಪಟ್ಟ ........... ಮಗಿಯ ನರೇಂದ್ರಗೆ ಈ ವೈಭವವನಿತ್ತು ಕಾಯ್ವಾತ", "ಮಗಿಯ ನರೇಂದ್ರಗೆ ಒಲಿದನು ........... ಪವಾಡ ಗೆಲಿದನು" ಮುಂತಾಗಿ ತುಂಬಾ ಭಕ್ತಿಭಾವದಿಂದ ಸ್ತುತಿಸಿದ್ದಾನೆ. ತನ್ನ ಇನ್ನೊಂದು ಹಾಡಿನಲ್ಲಿ ಮಗೆಪ್ಪ ಕವಿ "ಸದನದೊಳು ಬಲು ಕದನಗಳೆದ್ದವು, ಹೃದಯದೊಳಗೆ ಇವು ಶಲ್ಯಗಳಾದವು .......... ತರಹರಿಸಿತು ಮನ ಕೊರೆಯಿತು ಜೀವನ ........... ಮಗೆಯ ನರೇಂದ್ರಗೆ ಹಗೆಗಳು ಹೆಚ್ಚಿರೆ ಬಗೆಯಿಂದಲಿ ಅವರ ತೊಲಗಿಸಿ ಬಿಡಯ್ಯ ....... ಮಗುವಿನ ಸಲಹುದಯ್ಯ" ಎಂದು ಪ್ರಾರ್ಥಿಸಿಕೊಂಡಿರುವುದನ್ನು ನೋಡಿದರೆ, ಮಗೆಯ ನರೇಂದ್ರ ಮನೆಯ ಒಳಗಿನ ಮತ್ತು ಮನೆಯ ಹೊರಗಿನ ಶತ್ರುಗಳಿಂದ ಬಹಳ ಬಳಲಿ ಬೆಂಡಾದಂತೆ ತೋರುತ್ತದೆ. ಅವರಿಂದ ಉಂಟಾಗುತ್ತಿದ್ದ ಕಷ್ಟಕೋಟಲೆಗಳಿಂದ ತನ್ನನ್ನು ಪಾರು ಮಾಡುವಂತೆ ಮಗಿಯಪ್ರಭುವನ್ನು ಆರ್ತನಾಗಿ ಬೇಡಿಕೊಂಡಿದ್ದಾನೆ. ಆತನ ಇನ್ನೊಂದು ಹಾಡಿನಲ್ಲಿ ಮಗಿಯಪ್ರಭುವನ್ನು ಕುರಿತು "ಒಂದೊಂದು ಯುಗದಲ್ಲಿ ಹನ್ನೊಂದು ರೂಪ ಧರಿಸಿದವ" ಎಂದು ಬಂದಿರುವುದು ವಿಚಾರಣೀಯವಾಗಿದೆ. ಅಲ್ಲದೆ ಮಗಿಯಪ್ರಭುವನ್ನು ಈತ "ಮದ್ಗುರು" ಎಂದು ಕರೆದಿರುವನಲ್ಲದೆ ತಾನು "ಪ್ರಭುವಿನ ಶಿಶು" ಎಂದಿದ್ದಾನೆ.

ಚನ್ನಪ್ಪಕವಿಯ "ಕಾಣಲೆನಗಾನಂದವಾಯಿತು ಈ ಜಾಣ ಚರವ" ಎಂದು ಆರಂಭವಾಗುವ ಪದ್ಯದಲ್ಲಿ, ಮಗಿಯಪ್ರಭುವನ್ನು ಷಟ್‌ಸ್ಥಲಸಂಪನ್ನನೆಂದು ಕರೆದಿರುವ ಜೊತೆಗೆ, ಹೊನ್ನತ್ತಿಯೊಳು ಆತ ಮೆರೆದನೆಂಬ ಉಲ್ಲೇಖವೂ ಅಲ್ಲಿ ಬರುತ್ತದೆ. ಮಗಿಯಪ್ರಭುವಿನ ಪಾಲಕಿ ಉತ್ಸವದ ವರ್ಣನೆ ಕೂಡ ಚನ್ನಪ್ಪಕವಿಯ ಒಂದು ಹಾಡಿನಲ್ಲಿ ಬಂದಿದೆ.

ಹೀಗೆ ತೇರದಾಳದ ಅಲ್ಲಮಪ್ರಭುವನ್ನು ಕುರಿತು ಬೇರೆ ಬೇರೆ ಕವಿಗಳು ಹೇಳಿರುವ-ಕೃಷ್ಣೇಂದ್ರ ಸತಿಗೆ ವರ ಕೊಟ್ಟದ್ದು, ಸಂಕಟ ಸಮಯದಲ್ಲಿ ಪಾಥಾನಿಂದ ಅವನನ್ನು ಉಳಿಸಿದ್ದು, ಲಖಿಮೇಂದ್ರನ ಮನೆಯಲ್ಲಿ ನಿಂದು ಅವನಿಗೆ ವರವಿತ್ತದ್ದು, ಮಗಿಯ ನರೇಂದ್ರಗೆ ವರವಿತ್ತದ್ದು, ಅವನಿಗೆ ಗುರುವಾದದ್ದು, ಹನ್ನೊಂದು ಯುಗದಲ್ಲಿ ಹನ್ನೊಂದು ರೂಪ ಧರಿಸಿದ್ದು, ಹೊನ್ನತ್ತಿಯಲ್ಲಿ ಮೆರೆದದ್ದು- ಇವೆಲ್ಲ ಸಂಗತಿಗಳು ಮೂಲ ಅಲ್ಲಮನ ಚರಿತ್ರೆಯಲ್ಲಾಗಲಿ, ಬಸವಪ್ರಭುವಿನ ಚರಿತ್ರೆಯಲ್ಲಾಗಲಿ

ಬರುವುದಿಲ್ಲ. ಆದುದರಿಂದ ತೇರದಾಳದ ಬೃಹನ್ಮಠದಲ್ಲಿರುವ ಗದ್ದುಗೆ ಬಸವಪ್ರಭುಸ್ವಾಮಿಯ ಗದ್ದುಗೆಯೆಂದು ಒಪ್ಪಿಕೊಂಡರೂ ಮೇಲಿನ ಸಂಗತಿಗಳು ಆತನ ಚರಿತ್ರೆಯಲ್ಲಿ ಬರುವುದಿಲ್ಲವಾದುದರಿಂದ, ಮಗಿಯಪ್ರಭು ಬಸವಪ್ರಭುವಿಗಿಂತ ಭಿನ್ನನಾದ ಆದರೆ ಆತನ ಪರಂಪರೆಯಲ್ಲಿಯೇ ಬಂದ ಬೇರೊಬ್ಬ ಮಹಿಮಾನ್ವಿತ ವ್ಯಕ್ತಿ ಇರಬಹುದೇ ಅವನಿಂದ ಹಾಗೂ ಅವನ ಕಾಲದಲ್ಲಿ ಈ ಘಟನೆಗಳು ನಡೆದಿರಬಹುದೇ? ಎಂಬ ಸಂಶಯ ಉಂಟಾಗುತ್ತದೆ. ಅದೇನೇ ಇದ್ದರೂ, ಕೃಷ್ಣೇಂದ್ರ ಅಲ್ಲೇಂದ್ರ, ಲಖುಮೇಂದ್ರ- ಇವರ ಬಗ್ಗೆ ಖಚಿತ ವಿಷಯ ತಿಳಿದು ಬಂದಾಗ ಮಾತ್ರ ಈ ದಸರಿದೊಡಕು ಬಿಚ್ಚಿ ನಿಜಸಂಗತಿ ವಿದಿತವಾಗಲು ಸಾಧ್ಯ. ಅವರ ಖಚಿತ ಕಾಲ ನಿರ್ಣಯ ಕೂಡ ಇದನ್ನೇ ಅವಲಂಬಿಸಿದೆ.

ತೇರದಾಳದ ಭಕ್ತರ ಇಚ್ಛೆಯ ಮೇರೆಗೆ, ಬಸವಪ್ರಭುಸ್ವಾಮಿಗಳು ತಮ್ಮ ಕುರುಹಾಗಿ ಮಗಿಯನ್ನು ಕೊಟ್ಟು ಬಯಲಾದ ಮೇಲೆಯೆ ಅವರಿಗೆ 'ಮಗಿಯಪ್ರಭು' ಹೆಸರು ಬಂದಿರಲು ಸಾಧ್ಯ. ತದನಂತರವೆ ಭಕ್ತರು ಮಗೆಪ್ಪ ಮಗೆವ್ವ ಹೆಸರುಗಳನ್ನು ತಮ್ಮ ಮಕ್ಕಳಿಗೆ ಇಡಲು ಆರಂಭಿಸುವುದು ರೂಢಿ. ಈ ದೃಷ್ಟಿಯಿಂದ ಆಲೋಚಿಸಿದಾಗ, ಮಗೆಪ್ಪ ಕವಿ ಮಗಿಯಪ್ರಭುವಿನ ಅನಂತರದವನಾಗುತ್ತಾನೆ.

ತೋಂಟದ ಸಿದ್ಧಲಿಂಗಯತಿಯ ಗುರು ಪರಂಪರೆಯಲ್ಲಿ, ಬಸವಪ್ರಭುವಿನ ಅನಂತರ ಆರು ಜನ ಸ್ವಾಮಿಗಳು ಆಗಿಹೋದ ಮೇಲೆ ತೋಂಟದ ಸಿದ್ಧಲಿಂಗೇಶ್ವರರು ಬರುತ್ತಾರೆ. ಅವರಿಬ್ಬರ ಮಧ್ಯೆ ೧೫೦ ವರ್ಷಗಳ ಅಂತರವಿದ್ದು, ಬಸವಪ್ರಭುಸ್ವಾಮಿಗಳು ತೋಂಟದ ಸಿದ್ಧಲಿಂಗೇಶ್ವರರಿಗಿಂತ ೧೫೦ ವರ್ಷ ಪೂರ್ವದವರಾಗುತ್ತಾರೆ. ಕವಿ ಚರಿತೆಕಾರರ ಪ್ರಕಾರ ಸಿದ್ಧಲಿಂಗೇಶ್ವರರ ಕಾಲ ಕ್ರಿ.ಶ. ಸು. ೧೪೭೦. ಆದರೆ ಇತ್ತೀಚಿನ ಹೊಸ ಆಧಾರಗಳ ಬೆಳಕಿನಲ್ಲಿ ವಿದ್ವಾಂಸರು ಅವರ ಕಾಲವನ್ನು ನೂರುವರ್ಷ ಮುಂದಕ್ಕೆ ತಳ್ಳುತ್ತಾರೆ. ಆದುದರಿಂದ ಅವರ ಕಾಲವನ್ನು ಕ್ರಿ.ಶ. ೧೫೬೦ ೧೫೭೦ ಎಂದು ಇಟ್ಟುಕೊಳ್ಳಬಹುದು. ಅವರಿಗಿಂತ ೧೫೦ ವರ್ಷ ಪೂರ್ವದವರಾದ ಬಸವಪ್ರಭುಸ್ವಾಮಿಗಳು ಹದಿನೈದನೆಯ ಶತಮಾನದ ಪೂರ್ವಾರ್ಧಕ್ಕೆ ಸೇರಿದವರಾಗುತ್ತಾರೆ. ಅವರ ಅನಂತರದವನಾದ ಮಗೆಪ್ಪಕವಿಯ ಕಾಲ ಹದಿನೈದನೆಯ ಶತಮಾನದ ಪೂರ್ವಾರ್ಧದ ಅನಂತರವೆಂದು ಹೇಳಬಹುದೇ ವಿನಾ ಖಚಿತವಾಗಿ ಇಷ್ಟೇ ಎಂದು ಹೇಳಲು ಸಧ್ಯಕ್ಕೆ ಸಾಧ್ಯವಿಲ್ಲ.

ಮಗೆಪ್ಪಕವಿಯು "ದಾಸಿನಾಪ್ರಭುಭಕ್ತರ ಸದನದ ದಾಸಿನಾ" ಎಂದು ಆರಂಭವಾಗುವ ತನ್ನ ಒಂದು ಹಾಡಿನಲ್ಲಿ ತಾನು ಪುರಾಣ ಚನ್ನಪ್ಪನ ಮನೆಯ ಮತ್ತು

ಪರಮ ಕವಿತ್ವವ ಪೇಳಿದ ಗುರುಬಸವಪ್ಪನ ಮನೆಯ ದಾಸಿ ಎಂದು ಹೇಳಿಕೊಂಡಿದ್ದಾನೆ. ಇದರಿಂದ ಚನ್ನಪ್ಪಕವಿ, ಮಗಿಯಪ್ಪಕವಿ ಹಾಗೂ ಗುರುಬಸವಕವಿ ಈ ಮೂವರೂ ಸಮಕಾಲೀನರಾಗುತ್ತಾರೆ. ಇದೇ ಹಾಡಿನಲ್ಲಿ ಮಂಗಸೂಳಿ ಲಿಂಗಪ್ಪನ ಉಲ್ಲೇಖವೂ ಬರುತ್ತಿದ್ದು ಅವನ ಬಗ್ಗೆಯೂ ಏನೂ ತಿಳಿದುಬರುವುದಿಲ್ಲ.

"ನಿಟ್ಟಿಸಿ ಕಂಡೆ ದೃಷ್ಟ ಮೂರುತಿ ಸ್ಪಷ್ಟಗೀಶನ" ಎಂದು ಆರಂಭವಾಗುವ ಚನ್ನಪ್ಪಕವಿಯ ಒಂದು ಹಾಡು ಕೊಟ್ಟೂರು ಬಸವೇಶ್ವರನ ವೇಷಭೂಷಣಗಳನ್ನು ಆತನು ಮೆರೆದ ಕೆಲವು ಪವಾಡಗಳನ್ನು ಉಲ್ಲೇಖಿಸಲಾಗಿದ್ದು ಕೊನೆಯಲ್ಲಿ "ಕೊಟ್ಟೂರಿಂದ ಬಂದ ವಿಭೂತಿ ಬಸವನ" ನಿಟ್ಟಿಸಿಕಂಡೆ ಎಂದು ಬರುತ್ತದೆ. ಇದರಿಂದ ಚನ್ನಪ್ಪಕವಿ ಕೊಟ್ಟೂರು ಬಸವನನ್ನು ಕಣ್ಮುಟ್ಟ ನೋಡಿರಬೇಕೆನಿಸುತ್ತದೆ. ಈ ಕೊಟ್ಟೂರು ಬಸವನ ಕಾಲ ಕೂಡ ಖಚಿತವಾಗಿ ತಿಳಿದುಬರುವುದಿಲ್ಲ.

ಬಸವಲಿಂಗಕವಿ, ಕೊಟ್ಟೂರು ಬಸವೇಶ್ವರನ ಪುರಾಣವನ್ನು ಬರೆದಿದ್ದು, ಅದರಲ್ಲಿ ಪುರಾಣ ಸಮಾಪ್ತಿಯ ಕಾಲ ಕ್ರಿ.ಶ. ೧೬೭೮ ಎಂದು ತಿಳಿಸಲಾಗಿದೆ. (ಶಕ ೧೬೦೦ ಕಾಳಯುಕ್ತಿ ಸಂವತ್ಸರ) ಕ್ರಿ.ಶ. ಸು. ೧೬೬೫ರಲ್ಲಿರಬಹುದಾದ 'ಮಳೆಯರಾಜನ ಚರಿತ್ರದ ಕರ್ತೃ ಸಜ್ಜೆಯ ಸಿದ್ಧಲಿಂಗಾರ್ಯ ತಾನು ಕೊಟ್ಟೂರಿಗೆ ಹೋಗಿ, ಒಂಬತ್ತು ವರ್ಷ ಕೊಟ್ಟೂರು ಬಸವನ ಬಳಿ ಶಿಷ್ಯಭಾವದಿಂದಿದ್ದ ಬಗ್ಗೆ ತನ್ನ ಕೃತಿಯಲ್ಲಿ ತಿಳಿಸಿದ್ದಾನೆ. ಆದುದರಿಂದ ಕ್ರಿ.ಶ. ೧೬೬೫ರ ಹೊತ್ತಿಗೆ ಕೊಟ್ಟೂರು ಬಸವೇಶ್ವರರು ಇದ್ದರೆಂದಾಯಿತು. ಇನ್ನು ಕ್ರಿ.ಶ. ಸು. ೧೬೫೦ರಲ್ಲಿದ್ದ ಶಾಂತವೀರದೇಶಿಕ ತನ್ನ 'ಶಿವಗಣಚಾರಿತ್ರ' ಕೃತಿಯ ಗ್ರಂಥಾವತಾರದಲ್ಲಿ ಕೊಟ್ಟೂರು ಬಸವೇಶನನ್ನು ಸ್ತುತಿಸಿದ್ದಾನೆ. ಇದೇ ಕಾಲದವನಾದ ಸಿದ್ಧನಂಜೇಶ ತನ್ನ 'ರಾಘವಾಂಕ ಚಾರಿತ್ರ'ದಲ್ಲಿ ಕೊಟ್ಟೂರು ಬಸವನನ್ನು ಕಲಿಯುಗದ ಎರಡನೆಯ ಈಶ್ವರನೆನಿಸಿ ಮೆರೆದವನೆಂದು ಹೇಳಿದ್ದಾನೆ. ಅವನ ಕಾಲಕ್ಕೆ ಅಷ್ಟೊಂದು ಪ್ರಸಿದ್ಧನೂ ಪೂಜ್ಯನೂ ಆಗಿರಬಹುದಾದ ಕೊಟ್ಟೂರು ಬಸವ ಅವನಿಗಿಂತ ಇಪ್ಪತ್ತು ವರ್ಷವಾದರೂ ಹಿಂದಿನವನಾಗಿರಬೇಕು. ಅಂತೂ ಕೊಟ್ಟೂರು ಬಸವ ಹದಿನೇಳನೆಯ ಶತಮಾನದ ಪೂರ್ವಾರ್ಧದಲ್ಲಿದ್ದಿರಬಹುದಾದ ಸಾಧ್ಯತೆಯಿದೆ.

ಕೊಟ್ಟೂರು ಬಸವ, ಹರಪನಹಳ್ಳಿಯ ಪಾಳೆಯಗಾರರಾದ ಬಸವಂತ ನಾಯಕ, ಸೋಮಶೇಖರನಾಯಕರು ಇವರನ್ನು ಗುರುಸ್ವರೂಪರಾಗಿ ಕಾಣುತ್ತಿದ್ದಂತೆ ಪ್ರತೀತಿ ಇದೆ. ಹರಪನಹಳ್ಳಿಯ ಪಾಳೆಯಗಾರರು ಆಳಿದ ಅವಧಿ ಕ್ರಿ.ಶ. ೧೫೬೬ರಿಂದ ೧೭೭೪.

ಆರಂಭದಲ್ಲಿ ಬೇಡರಾಗಿರಬಹುದಾದ ಈ ಪಾಳೆಯಗಾರರು ಕೊಟ್ಟೂರು ಬಸವೇಶ್ವರರ ಕಾಲದಲ್ಲಿ ಹದಿನೇಳನೆಯ ಶತಮಾನದ ಪೂರ್ವಾರ್ಧದಲ್ಲಿ ವೀರಶೈವರಾಗಿರಬಹುಧಾದ ಸಾಧ್ಯತೆ ಇದೆ.

ಇನ್ನು ಶಕ ೧೭೮೩ ರೌದ್ರಿ ಸಂವತ್ಸರ, ಫಾಲ್ಗುಣ ಮಾಸ ಶುಕ್ಲಪಕ್ಷ ನವಮಿ ಎಂದರೆ ಕ್ರಿ.ಶ. ೧೮೬೦ರಲ್ಲಿ ದುರದುಂಡೀಶ್ವರನ ಕಾವ್ಯವನ್ನು ಬರೆದಿರುವ ಬಸವಕವಿ ತನ್ನ ಕೃತಿಯಲ್ಲಿ, ದುರದುಂಡೀಶ್ವರರು ಮಹಲಿಂಗೇಶನೊಂದಿಗೆ, ತೇರದಾಳದ ಪ್ರಭುದೇವನಲ್ಲಿಗೆ ಬಂದು ಅಲ್ಲಿಂದ ಅರಭಾವಿಗೆ ಆಗಮಿಸಿ ಹಲವಾರು ಅದ್ಭುತ ಕಾರ್ಯಗಳನ್ನು ಅಲ್ಲಿ ಮೆರೆದಂತೆ ಹೇಳಿದ್ದಾನೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ, ಕೊಟ್ಟೂರು ಬಸವನನ್ನು ಅರಭಾವಿಗೆ ಬರಮಾಡಿಕೊಂಡುದು ಮತ್ತು ಕಿತ್ತೂರು ದೊರೆ ಮಲ್ಲಸರ್ಜನನ್ನು ಟಿಪ್ಪುಸುಲ್ತಾನನ ಬಂಧನದಿಂದ ಬಿಡಿಸಿದ್ದು. ದುರದುಂಡೀಶ್ವರರೊಡನೆ ತೇರದಾಳಕ್ಕೆ ಬಂದ ಮಹಲಿಂಗೇಶ ಬಹಳ ಪ್ರಭಾವಶಾಲಿ ಸ್ವಾಮಿಯಾಗಿದ್ದು, ಮುಧೋಳ ಸಂಸ್ಥಾನದ ದೊರೆ ಮಾಲೋಜಿರಾಜನಿಂದ ಪೂಜಿತನಾಗಿದ್ದಂತೆ ತಿಳಿದುಬರುತ್ತದೆ. ಬಸವಕವಿಯ ಇನ್ನೊಂದು ಕೃತಿಯಾದ ಮಹಲಿಂಗಲೀಲೆ ಕಾವ್ಯ ಈ ಮಹಲಿಂಗೇಶನನ್ನು ಕುರಿತದ್ದೇ ಆಗಿದೆ. ಅದರಲ್ಲಿ ಬರುವ ಐತಿಹಾಸಿಕ ಸಂಗತಿಗಳನ್ನಾಧರಿಸಿ ಮಹಲಿಂಗ ಜಂಗಮನು ಹದಿನೆಂಟನೆಯ ಶತಮಾನದ ಕೊನೆಯ ಮೂರು ದಶಕಗಳ ಅವಧಿಯಲ್ಲಿರಬಹುದೆಂದು ವಿದ್ವಾಂಸರು ನಿರ್ಧರಿಸಿದ್ದಾರೆ. ಇದರಿಂದ ಅವರ ಸಮಕಾಲೀನರಾದ ದುರದುಂಡೀಶ್ವರರು ಕೂಡ ಆ ಅವಧಿಯಲ್ಲಿ ಜೀವಿಸಿದ್ದರು. ಕೊಟ್ಟೂರು ಬಸವನನ್ನು ಈ ದುರದುಂಡೀಶ್ವರು ಅರಭಾವಿಗೆ ಬರಮಾಡಿಸಿಕೊಂಡಿರುವುದರಿಂದ ಕೊಟ್ಟೂರು ಬಸವ ಆಗ ಇನ್ನೂ ಜೀವಿಸಿದ್ದರೆಂದು ಹೇಳಬಹುದು. ಆದರೆ ಅವರು ವಯಸ್ಸಿನಿಂದ ದುರದುಂಡೀಶ್ವರರಿಗಿಂತ ಬಹಳ ಹಿರಿಯರಾಗಿರಬಹುದು. ಕೊಟ್ಟೂರು ಬಸವೇಶ್ವರರು ತೇರದಾಳ ಮೂಲಕ, ಅರಭಾವಿಗೆ ಬರುವಾಗ ಪ್ರಾಯಃ ಚನ್ನಪ್ಪಕವಿ ಅವರನ್ನು ನೋಡಿ, ಹಾಡಿನ ಮೂಲಕ ಸ್ತುತಿಸಿರಬೇಕು.

ಹೀಗೆ ಕಾವ್ಯಗಳಲ್ಲಿ ಬರುವ ವಿವರಗಳನ್ನು ಹಾಗೂ ಐತಿಹಾಸಿಕ ಸಂಗತಿಗಳನ್ನು ಒಟ್ಟಾರೆ ಪರಿಶೀಲಿಸಿದಾಗ ಕೊಟ್ಟೂರು ಬಸವೇಶ್ವರರು ಹದಿನೇಳನೆಯ ಶತಮಾನದ ಪೂರ್ವಾರ್ಧದಿಂದ ಹದಿನೆಂಟನೆಯ ಶತಮಾನದ ಉತ್ತರಾರ್ಧದ ವರೆಗೆ ಬಹುದೀರ್ಘಕಾಲ ಬಾಳಿರಬಹುದೆನಿಸುತ್ತದೆ. ಅವರನ್ನು ಕಣ್ಮುಟ್ಟ ನೋಡಿರುವ

ಚನ್ನಪ್ಪಕವಿ ಮತ್ತು ಆತನ ಸಮಕಾಲೀನರಾದ ಮಗೆಪ್ಪದೇಸಾಯಿ ಹಾಗೂ ಗುರುಬಸವ-ಇವರು ಕೂಡ ಹದಿನೇಳು, ಹದಿನೆಂಟನೆಯ ಶತಮಾನದವರಾಗಿರಬೇಕು. ಅವರು ಉರ್ದುಭಾಷೆಯಲ್ಲಿ ಹಾಡುಗಳನ್ನು ಬರೆದಿರುವುದೂ ಇದಕ್ಕೆ ಉಪಷ್ಟಂಬಕವಾಗಿದೆ.

ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವಿದೆ. ದುರದುಂಡೀಶ್ವರರು, ಮಹಲಿಂಗೇಶರೊಂದಿಗೆ ತೇರದಾಳ ಪ್ರಭುದೇವರಲ್ಲಿಗೆ ಬಂದರೆಂದು 'ದುರದುಂಡೀಶ್ವರಲೀಲೆ'ಯಲ್ಲಿ ಹೇಳಲಾಗಿದೆ. ಇಲ್ಲಿ ಪ್ರಭುದೇವನೆಂದರೆ ತೇರದಾಳದ ಬಸವಪ್ರಭುವೆಂದು ಹೇಳಲು ಬರುವುದಿಲ್ಲ. ಏಕೆಂದರೆ ಕಾಲದ ದೃಷ್ಟಿಯಿಂದ ಅವರು ಬಹಳ ಹಿಂದಿನವರಾಗುತ್ತಾರೆ. ಈ ಸಂದರ್ಭದಲ್ಲಿ ಎರಡು ಊಹೆಗಳು ಸಾಧ್ಯ. ೧. ದುರದುಂಡೀಶ್ವರರು ಮೂಲ ಬಸವಪ್ರಭುವಿನ ಗದ್ದುಗೆಯ ದರ್ಶನ ಪಡೆದಿರಬಹುದು. ೨. ಮೂಲ ಬಸವಪ್ರಭುವಿನ ಪರಂಪರೆಯ ಇನ್ನೊಬ್ಬ ಬಸವಪ್ರಭುವಿನ ದರ್ಶನ ಪಡೆದಿರಬಹುದು. ಚನ್ನಪ್ಪಕವಿ, ಕೊಟ್ಟೂರು ಬಸವನನ್ನು ಕಣ್ಮುಟ್ಟ ನೋಡಿರುವುದರಿಂದ, ಎರಡನೆಯ ಊಹೆಯೆ ಸರಿಯೆನಿಸುತ್ತದೆ. ಇದು ನಿಜವಿದ್ದಲ್ಲಿ ಈ ಮೂವರೂ ಕವಿಗಳು ದುರದುಂಡೀಶ್ವರರ ಕಾಲದಲ್ಲಿದ್ದಿರಬಹುದಾದ, ಮೂಲ ಬಸವಪ್ರಭುವಿನ ಪರಂಪರೆಯ ಒಬ್ಬ ಬಸವಪ್ರಭುವಿನ ಕಾಲದಲ್ಲಿ ಎಂದರೆ ೧೭-೧೮ನೇ ಶತಮಾನದಲ್ಲಿ ಇದ್ದಿರಬಹುದಾಗಿದೆ. ಚನ್ನಪ್ಪಕವಿ "ಮಹಾಲಿಂಗಪುರ ನಿವಾಸ ಮಹಾಲಿಂಗಪಾಹಿಮಾಂ" ಎಂದು ಮಹಲಿಂಗೇಶನನ್ನು "ಗುರು ಶಿವಲಿಂಗೇಶ ಪರಮಪಾವನ ವರಮಹೇಶ" ಎಂದು ಶಿವಲಿಂಗೇಶ (ದುರದುಂಡೀಶ್ವರರ ಮೂಲ ಹೆಸರು) ನನ್ನು ಸ್ತುತಿಸಿರುವುದು ಇದಕ್ಕೆ ಸಮರ್ಥನೆ ಒದಗಿಸುತ್ತದೆ. ಈ ಕವಿತ್ರಯರ ಹಾಡುಗಳಲ್ಲದೆ ಬೇರೆ ಬೇರೆ ಕವಿಗಳ ಹಾಡುಗಳೂ ಪ್ರಸ್ತುತ ಸಂಕಲನದಲ್ಲಿ ಇವೆ. ಆ ಕವಿಗಳು ಇವರ ಸಮಕಾಲೀನರೋ ತದನಂತರದವರೋ ಆಗಿರಬೇಕು.

ಇಲ್ಲಿ ಬಂದಿರುವ ಹಾಡುಗಳೆಲ್ಲ, ಬಹುತೇಕ ಎಲ್ಲವೂ ತೇರದಾಳದ ಮಗಿಯಪ್ರಭುವನ್ನು ಕುರಿತವಾದರೂ ವೀರಭದ್ರ, ಗಣಪತಿ, ಹನುಮಂತ ಪಾರ್ವತಿ ಜಗದಂಬೆ ಮೊದಲಾದ ದೇವದೇವತೆಗಳನ್ನು ಕುರಿತ ಹಾಡುಗಳೂ, ಹಾಗೆಯೆ ಮಹಾಲಿಂಗಪುರದ ಮಹಲಿಂಗೇಶ ಶಿಡ್ಲ್ಯಾಳ ಪ್ರಭು, ಮರುಳಸಿದ್ಧ, ಪವಾಡದ ಬಸವಗುರು, ಶಿವಲಿಂಗೇಶ, ಸಂಗಮೇಶ ಮೊದಲಾದ ಮಹಿಮಾ ಪುರುಷರನ್ನು ಕುರಿತ ಹಾಡುಗಳೂ ಒಂದೋ ಎರಡೋ ಇವೆ. ಕೆಲವು ಹಾಡುಗಳು ಉರ್ದು ಹಾಗೂ ಮರಾಠಿ ಭಾಷೆಯಲ್ಲಿರುವುದು ಗಮನಾರ್ಹ.

ಪ್ರಾರ್ಥನೆ, ಆತ್ಮನಿವೇದನೆ, ಕೀರ್ತನೆ ಮತ್ತು ಮಹಿಮಾ ವರ್ಣನೆಗಳೇ ಇಲ್ಲಿಯ ಹಾಡುಗಳಲ್ಲಿ ಪ್ರಧಾನವಾಗಿ ಕಂಡುಬರುವವಾದರೂ ವಿಡಂಬನೆ, ನೀತಿಬೋಧೆ ಕೂಡ ಕೆಲವು ಹಾಡುಗಳಲ್ಲಿ ಬಂದಿರುವುದನ್ನು ಮರೆಯಲಾಗದು. ಪ್ರಾರ್ಥನಾರೂಪದ ಹಾಡುಗಳು ಹೆಚ್ಚಾಗಿ ಆರಾಧ್ಯದೈವದ ಹೆಸರುಗಳ ಪಟ್ಟಿಯಾಗಿದ್ದು, ಆ ದೈವಗಳು ಮಾಡಿದ ಪವಾಡಗಳನ್ನು ವಿವರಿಸುತ್ತವೆ. ಇಂಥವುಗಳಲ್ಲಿ ಕಾವ್ಯಾಂಶ ತೀರಾ ಕಡಿಮೆ ಎನ್ನಬಹುದು. ಆದರೆ ಆತ್ಮನಿವೇದನೆ ಮತ್ತು ಸತಿ ಪತಿಭಾವದ ಹಾಡುಗಳಲ್ಲಿ ಎಲ್ಲವಲ್ಲದಿದ್ದರೂ ಹಲವಾರು ಹಾಡುಗಳು, ಹೃದ್ಯವಾಗಿವೆ. ಉದಾಹರಣೆಗಾಗಿ ಒಂದೆರಡನ್ನು ಇಲ್ಲಿ ನೋಡಬಹುದು:

"ಅಲ್ಲಯ್ಯ ಅದ್ವೈತ ಜ್ಞಾನದ ನಿಧಿಯೆ" ಎಂದು ಆರಂಭವಾಗುವ ಮಗೆಪ್ಪಕವಿಯ ಹಾಡಿನಲ್ಲಿ ಅಲ್ಲಯ್ಯ ಗುರು ಜ್ಞಾನದ ಬೀಜವನ್ನು ಶಿಷ್ಯನ ಹೃದಯ ಭೂಮಿಯಲ್ಲಿ ಬಿತ್ತಿದಾಗ ಆಗುವ ಫಲಿತಾಂಶವನ್ನು "ಸಿಂಪೆಯ ಗರ್ಭದಿ ಜಾತಿ ಮೌಕ್ತಿಕವು ಜನಿಸಿದಂತೆ" ಆಗುತ್ತದೆಂದು ಹೇಳಿರುವಲ್ಲಿ ಕವಿ ಬಳಸಿರುವ ಉಪಮೆ ಬಹಳ ಅರ್ಥಪೂರ್ಣವಾಗಿದೆ. ನಾನೇಕೆ ದುರ್ಬಲನು ನಾನೇಕೆ ದೇಶಿಕನು" ಹಾಡಿನಲ್ಲಿ, ಪ್ರಭುವಿನ ಸಾಸಿರನಾಮದ ಹಳೆಯ ನಾಣ್ಯಗಳಿರುವಾಗ, ಒಂದೊಂದನ್ನು ಮುರಿಸಿ ನಿರ್ದೋಷವೆಂಬ ಧಾನ್ಯವ ತಂದು, ಹಸನಾಗಿ ಪಕ್ವಾನ್ನ ಮಾಡಿ ಉಣ್ಣುತ್ತೇನೆ. ಕಾಮಧೇನು ರೂಪದ ಜಂಗಮಮೂರ್ತಿಯಿಂದ ಅಚ್ಚ ತೀರ್ಥಪ್ರಸಾದಗಳನ್ನು ಪಡೆದು, ಎಚ್ಚರಿಕೆಯಿಂದ ಸೇವಿಸಿ ತೃಪ್ತನಾಗುತ್ತೇನೆ, ಶ್ರೀಗುರುವಿತ್ತ ಅರಿವಿನ ವಿಭೂತಿ ಧರಿಸಿ ಕಾಯವನ್ನು ಪಾವನ ಮಾಡಿಕೊಳ್ಳುತ್ತೇನೆ. ಹೀಗೆ ನನ್ನ ಮಾನಾಭಿಮಾನವನ್ನು ಕಾಯುವ ಪ್ರಭುವಿರುವತನಕ ನಾನೇಕೆ ದುರ್ಬಲ? ನಾನೇಕೆ ದೇಶಿಕ? ಎಂದು ಪ್ರಶ್ನಿಸಿರುವುದು, ಸರ್ವಾರ್ಪಣಭಾವದ ಭಕ್ತನ ಗಟ್ಟಿ ನಂಬಿಕೆಯನ್ನು ಎತ್ತಿತೋರಿಸುವಂತಿದ್ದು ಬಹಳ ಸ್ವಾರಸ್ಯಪೂರ್ಣವಾಗಿದೆ. ಹೀಗೆ ಮಗೆಪ್ಪಕವಿಯ ಇನ್ನೂ ಕೆಲವು ಹಾಡುಗಳು ಸಾಹಿತ್ಯದ ದೃಷ್ಟಿಯಿಂದ ಪರಿಭಾವನಾರ್ಹವಾಗಿವೆ.

ಚನ್ನಪ್ಪಕವಿಯ ಪ್ರಾರ್ಥನಾರೂಪದ ಹಾಡುಗಳಲ್ಲಿ ಸಂಸ್ಕೃತ ಶಬ್ದಗಳ ಬಳಕೆ ಅಧಿಕವಾಗಿದೆ. ಈತನ ಬಹಳ ಹಾಡುಗಳು ಸತಿ-ಪತಿಭಾವದಿಂದ ಕೂಡಿದ್ದು ತುಂಬಾ ಹೃದ್ಯವಾಗಿವೆ. ಈ ಹಾಡುಗಳು ೧. ನಲ್ಲೆನಲ್ಲನನ್ನು ೨. ನಲ್ಲನಲ್ಲೆಯನ್ನು ೩. ಸಖಿಯು ತನ್ನ ಗೆಳತಿಯ ನಲ್ಲನನ್ನು ೪. ನಲ್ಲೆ ತನ್ನ ಸಖಿಯನ್ನು ಮತ್ತು ೫. ನಲ್ಲ ತನ್ನ ನಲ್ಲೆಯ

ಸಖಿಯನ್ನು ಉದ್ದೇಶಿಸಿ ಹೇಳಿದಂತಿವೆ. ಹೀಗೆ ಸತಿ-ಪತಿಭಾವದ ಹಾಡುಗಳಲ್ಲಿ ಕವಿ ವೈವಿಧ್ಯವನ್ನು ತಂದಿರುವುದು ಇಲ್ಲಿಯ ವಿಶೇಷ. ಇವೆಲ್ಲವುಗಳಲ್ಲಿರುವುದು ವಿರಹವ್ಯಥೆ ಮತ್ತು ಅದರ ಪರಿಣಾಮದ ಕಥೆ. ಮುನಿಸುಗೊಂಡ ತನ್ನ ನಲ್ಲೆಯನ್ನು ಅವಳ ನಲ್ಲ, ಅವಳ ಸೌಂದರ್ಯದ ವರ್ಣನೆಯ ಮೂಲಕ ಒಲಿಸಿಕೊಳ್ಳುವ ಜಾಣ್ಮೆ "ಮುನಿಸು ಮಾಡುವರೆ ನೀರೆ ಮನ್ಮನೋಹರೆ" ಎಂದು ಆರಂಭವಾಗುವ ಹಾಡಿನಲ್ಲಿ ಸ್ವಾರಸ್ಯಕರವಾಗಿ ಒಡಮೂಡಿದೆ. ಇಂತಹ ಆಕರ್ಷಕ ಹಾಡುಗಳು ಚನ್ನಪ್ಪಕವಿಯ ಹಾಡುಗಳಲ್ಲಿ ಸಾಕಷ್ಟಿವೆ.

ಗುರುಬಸವಕವಿಯ ಕೆಲವು ಹಾಡುಗಳಲ್ಲಿ ಯಾಗಿಕ ಬೆಡಗು ಹಾಗೂ ಆಧ್ಯಾತ್ಮಿಕತೆಗಳು ಹಾಸುಹೊಕ್ಕಾಗಿರುವುದನ್ನು ಕಾಣುತ್ತೇವೆ. ಇಷ್ಟಲಿಂಗವನ್ನು ಕುರಿತ ಈತನ ಒಂದು ಜೋಗುಳಪದ "ಏನು ಇಲ್ಲದಂದು ತಾನಾದ ಶಿವನು। ಪ್ರಣವ ಉದ್ಭವಿಸಿ ಕಂದನಾದನು।। ಪ್ರಾಣಲಿಂಗ[ನೆಂದು] ಹೆಸರ ಪಡೆದನು।ನಿಜ। ಜ್ಞಾನದಿಂದ ಲೀಲೆಯಾಡಿದನು।। ಬಣ್ಣದ ತೊಟ್ಟಿಲ ಹೃದಯಕಮಲದೊಳಗೆ। ಹನ್ನೆರಡೆಸಳಿನ ಹಾಸಿಕೆ ಮೇಲೆ ಚೆನ್ನಮಹಾಲಿಂಗನ ಮಲಗಿಸಿ ಬೇಗ। ಕನ್ಯಾಮುತ್ತೈದೇರು ತೂಗಿರಿ ಈಗ।। ಅಷ್ಟಾವರಣದ ಶಲ್ಲೆಯನ್ನುಟ್ಟು ನಿಷ್ಠೆ ಪಂಚಾಚಾರ ಕುಪ್ಪಸ ತೊಟ್ಟು। ಶ್ರೇಷ್ಠಷಟ್‌ಸ್ಥಲದ ವಸ್ತುಗಳಿಟ್ಟು। ನೀವು। ಇಷ್ಟಲಿಂಗನ ತೂಗಿ ಹಚ್ಚಿರೆ ಬಟ್ಟು ............ ತೊಟ್ಟಿಲವಿಪ್ಪುದು ಅಂತಸ್ಥಾನದಲಿ। ತುಟ್ಟ ತುದಿಯಭ್ರೂಮಧ್ಯ ಸ್ಥಾನದಲಿ। ಕಟ್ಟಿದ ಉನ್ಮನಿ ಪವನಸ್ಥಾನದಲಿ। ನೀವು। ದಿಟ್ಟಿಸಿ ತೂಗಿರೆ ಚಿತ್ತ ಹಸ್ತದಲಿ।।। ತಾನೆ ತೊಟ್ಟಿಲನಾಗಿ ತಾನೆ ಮಲಗಿದ। ತನ್ನ ಕೈಯಲಿ ತೂಗಿ ನಿದ್ರಸ್ಥನಾದ। ತಾನೆ ಎಚ್ಚರಾಗಿ ಎದ್ದು ಕುಳಿತಿದ್ದ। ಪ್ರಭು ನಿರಂಜನಸ್ವಾಮಿ ಲೀಲಾ ವಿನೋದ।। ಮುಂತಾಗಿ ಬರುತ್ತಿದ್ದು, ಇಷ್ಟಲಿಂಗದ ಅನುಸಂಧಾನದ ಮೂಲಕ ಶಿವಯೋಗ ಸಾಧಿಸುವ ವೀರಶೈವದ ನಿಲುವು ಇಲ್ಲಿ ಸಮುಚಿತ ರೀತಿಯಲ್ಲಿ ನಿರೂಪಣೆಗೊಂಡಿರುವುದನ್ನು ಕಾಣುತ್ತೇವೆ. ಪ್ರಶ್ನೋತ್ತರ ರೂಪದಲ್ಲಿ ಪ್ರಭುದೇವನನ್ನು ಬಣ್ಣಿಸುವ ಈತನ "ಬೀದಿಯ ಮ್ಯೆಯೊಳು ವೇದವನೋದುತ ಹಾದೀಲೆ ಬರುವ ಈತನ್ಯಾರೆ" ಎಂದು ಆರಂಭವಾಗುವ ಹಾಡು ವಿಶಿಷ್ಟ ರೀತಿಯದಾಗಿದೆ.

"ಅಕ್ಕಾ ಈ ಶ್ಲೋಕದರ್ಥ ಹ್ಯಾಂಗ। ತಿಳಿಯೆ ಪೇಳೆನಗಕ್ಕಾ" ಎಂದು ಆರಂಭವಾಗುವ ಚರಲಿಂಗ ಕವಿಯ ಹಾಡು ಹೀಗೆ ಮುಂದುವರಿಯುತ್ತದೆ:

"ಬೆಕ್ಕು ಪಾಕಂಗೈಯ್ಯುತಿರಲಿಕ್ಕೆ ಇಲಿಯು ಉರಿ ಹಚ್ಚಲಾಗಿ ಎಕ್ಕಲ, ವ್ಯಾಘ್ರ ದಿಕ್ಕುಗೆಡಲು। ಪಕ್ಕಾತಗದು ನವಿಲು ಕುಣಿದೀತಕ್ಕಾ।। ಕೋಣ ಗಜವ। ನುಂಗಲದರ ಗೋಣ

ಮುರಿದು ಗಿಳಿ ನುಂಗಿತು। ಜಾಣನಾತ್ಮ ಪಂಜರದೊಳು ಮಾಣದಾ ಗಿಳಿ ಶಿವನಾಮೋದಿತಕ್ಕಾ।। ಮೂರುವಳಿದುಳಿದರೆ ಭಕ್ತ। ಆರು ಜ್ಞಾನರಿಯೆ ವಿರಕ್ತ। ಮಾರಾರಿ ಗುರುಚರಲಿಂಗೇಂದ್ರನ। ಕಾರುಣ್ಯದಿಂದಿರುವುದಕ್ಕಾ।। ಇಲ್ಲಿರುವ ಬೆಡಗನ್ನು ಅರ್ಥೈಸಿಕೊಂಡಾಗ ದೊರೆವ ಆನಂದ, ಅನುಭವಿಸಿ ತಿಳಿಯುವಂತಹುದು

"ಏನು ಬೇಡಲೊ ನಾನು ಸಾಂಬ ನಿನಗೆ" ಎಂಬ ಹಾಡು 'ಅಲ್ಲಮ ಪ್ರಭು ಲಿಂಗೇಶ' ಅಂಕಿತದಲ್ಲಿದ್ದು ಅದು ಸುಡುಗಾಡೊಳಿರುವ ಬೇಡಿಕೊಂಡರೆ ಬಿಟ್ಟು ಓಡಿ ಹೋಗುವ।। ಯಾರಿಲ್ಲದವನೊ ನೀನು। ಒಬ್ಬರ।ಮನೆಯ। ಸೇರಿಕೊಂಬವನೊ ನೀನು- ಮುಂತಾಗಿ ಶಿವನು ಸುಡುಗಾಡಿನಲ್ಲಿರುವುದನ್ನು, ಅವನು ಪರದೇಶಿಯಾಗಿರುವುದನ್ನು, ಭಕ್ತರಿಗೆ ತೊತ್ತಾದುದನ್ನು, ಮುದಿ ಎತ್ತನ್ನೇರಿ ಹೋಗುವುದನ್ನು, ಭಿಕ್ಷೆ ಬೇಡುವುದನ್ನು ಒಂದೊಂದಾಗಿ ಎತ್ತಿ ತೋರಿಸುತ್ತ, ನಿಂದಿಸುವ ಮೂಲಕ ಶಿವನನ್ನು ಸ್ತುತಿಸುವ ವಿಧಾನ ಪರಿಶೀಲನಯೋಗ್ಯವಾಗಿದೆ. ಉಳಿದ ಬೇರೆ ಬೇರೆ ಕವಿಗಳ ಹಾಡಿನಲ್ಲೂ ಬೆಡಗು, ಆಧ್ಯಾತ್ಮ, ಮುಂಡಗೆ-ಇತ್ಯಾದಿಗಳನ್ನು ಗುರುತಿಸಬಹುದಾಗಿದೆ.

ಇನ್ನು ಪ್ರಸ್ತುತ ಕೃತಿಯ ಪರಿಷ್ಕರಣ ಹಾಗೂ ಸಂಪಾದನೆಯನ್ನು ಕುರಿತು ಒಂದೆರಡು ಮಾತು:

ಮೊದಲು ಹೇಳಿರುವಂತೆ ಲಿಂ. ಬುದ್ಧಯ್ಯ ಪುರಾಣಿಕ ಅವರು ಈ ಹಾಡುಗಳನ್ನು ೧೯೨೯-೩೧ರ ಮಧ್ಯದ ಅವಧಿಯಲ್ಲಿ ಪ್ರಕಟಿಸಿದ್ದಾರೆ. ತೇರದಾಳದ ಅಲ್ಲಮಪ್ರಭುವಿನ ಬೃಹನ್ಮಠದಲ್ಲಿ ದೊರೆತ ಹಸ್ತಪ್ರತಿಗಳೇ ಅವರಿಗೆ ಆಧಾರ ಹಾಗೂ ಆಕರ. ಆ ಹಸ್ತಪ್ರತಿಗಳ ಬಗ್ಗೆ ಹೆಚ್ಚಿನ ವಿವರಗಳನ್ನು ತಮ್ಮ ಮುನ್ನುಡಿ ರೂಪದ ಲೇಖನಗಳಲ್ಲಿ ಪುರಾಣಿಕರು ಕೊಟ್ಟಿಲ್ಲ. ಈಗ ನಮಗೆ ಅವು ದೊರೆಯಲೂ ಇಲ್ಲ. ಏಕೆಂದರೆ ಅವರ ವಂಶಜರ ಬಳಿಯಲ್ಲಿಯೂ ಮುದ್ರಿತ ಪ್ರತಿಗಳಿವೆಯೇ ವಿನಾ ಹಸ್ತಪ್ರತಿಗಳಿಲ್ಲ. ಆದುದರಿಂದ ಮುದ್ರಿತ ಪ್ರತಿಗಳನ್ನೇ ಆಧರಿಸಿ ಪ್ರಸ್ತುತ ಸಂಕಲನವನ್ನು ಸಿದ್ಧಪಡಿಸಲಾಗಿದೆ.

ಮುದ್ರಿತ ಪ್ರತಿಗಳಲ್ಲಿ ಹಾಡುಗಳನ್ನು ಉದ್ದಕ್ಕೂ ಸಾಲಾಗಿ ಮುದ್ರಿಸುತ್ತ ಹೋಗಲಾಗಿದೆ. ನಮ್ಮ ಈ ಆವೃತ್ತಿಯಲ್ಲಿ ಹಾಡಿನ ನುಡಿಗಳನ್ನು ಒಂದರ ಕೆಳಗೆ ಒಂದು ಬರುವಂತೆ ಹೊಂದಿಸಲಾಗಿದೆ. ಮುದ್ರಿತ ಪ್ರತಿಯಲ್ಲಿಯ ಹಲವಾರು ಮುದ್ರಣ ದೋಷಗಳನ್ನು ತಿದ್ದಿ ಸರಿಪಡಿಸಲಾಗಿದೆ.

ಮುದ್ರಣ ದೋಷಗಳ ಜೊತೆ, ಹಲವಾರು ಸಂದಿಗ್ಧಗಳೂ ಮೂಲ ಮುದ್ರಿತ ಪ್ರತಿಯಲ್ಲಿ ಉಳಿದುಕೊಂಡು ಬಂದಿದ್ದವು. ಅವುಗಳನ್ನು ಸಂದರ್ಭ ಸನ್ನಿವೇಶ, ಅರ್ಥದ ಪ್ರಸ್ತುತತೆ ಹಾಗೂ ಔಚಿತ್ಯ ಇತ್ಯಾದಿಗಳ ಹಿನ್ನೆಲೆಯಲ್ಲಿ ಪರಿಷ್ಕರಿಸಲು ಪ್ರಯತ್ನಿಸಲಾಗಿದೆ. ಪರಿಷ್ಕೃತ ಪಾಠವನ್ನು ಚೌಕಕಂಸದಲ್ಲಿ ತೋರಿಸಿ ಮೂಲ ಮುದ್ರಿತ ಪ್ರತಿಯಲ್ಲಿದ್ದ ಪಾಠವನ್ನು ಅಡಿಟಿಪ್ಪಣಿಯಲ್ಲಿ ಕೊಡಲಾಗಿದೆ. ಕೆಲವು ಸಂದಿಗ್ಧಗಳನ್ನು ಪರಿಷ್ಕರಿಸಲು ಸಾಧ್ಯವಾಗಿಲ್ಲ. ಅಂಥವನ್ನು ಮೂಲದಲ್ಲಿದ್ದಂತೆಯೆ ಇಡಲಾಗಿದೆ. ಕೆಲವು ಸಂದಿಗ್ಧಗಳನ್ನು ಪರಿಹರಿಸುವಲ್ಲಿ ಡಾ. ಎಂ.ಎಂ. ಕಲಬುರ್ಗಿ ಅವರು ನೀಡಿದ ನೆರವನ್ನು ನೆನೆಯದಿರಲಾರೆ.

ಒಬ್ಬ ಕವಿಯ ಹಾಡುಗಳು, ಇನ್ನೊಬ್ಬ ಕವಿಯ ಹಾಡುಗಳಲ್ಲಿ ಕಣ್ತಪ್ಪಿನಿಂದ ಮೂಲ ಮುದ್ರಿತ ಪ್ರತಿಯಲ್ಲಿ ಸೇರಿಹೋಗಿದ್ದವು. ಅಂಕಿತವನ್ನಾಧರಿಸಿ ಅವುಗಳನ್ನು ಆಯಾ ಕವಿಗಳ ಹಾಡಿನಲ್ಲಿ ಸೇರಿಸಿ ಸರಿಪಡಿಸಲಾಗಿದೆ.

ಪುರಾಣಿಕರು ಪ್ರಕಟಿಸಿರುವ ಹಾಡುಗಳ ಸಂಕಲನಗಳಲ್ಲಿ ಒಬ್ಬ ಕವಿಯ ಒಂದಿಷ್ಟು ಹಾಡುಗಳು ಒಂದು ಸಂಕಲನದಲ್ಲಿ, ಇನ್ನೊಂದಿಷ್ಟು ಹಾಡುಗಳು ಮತ್ತೊಂದು ಸಂಕಲನದಲ್ಲಿ, ಮತ್ತೊಂದಿಷ್ಟು ಹಾಡುಗಳು ಮಗುದೊಂದು ಸಂಕಲನದಲ್ಲಿ ಸೇರಿವೆ. ಇಲ್ಲಿ ಒಬ್ಬ ಕವಿಯ ಎಲ್ಲ ಹಾಡುಗಳನ್ನು ಒಂದೇ ಕಡೆಗೆ ತರಲಾಗಿದೆ.

ಹೀಗೆ ಒಬ್ಬ ಕವಿಯ ಹಾಡುಗಳನ್ನು ಒಂದೇ ಕಡೆಗೆ ತಂದಿರುವ ಜೊತೆಗೆ ಅವುಗಳನ್ನು ವಿಷಯಾನುಗುಣವಾಗಿ, ಎಂದರೆ ಪ್ರಾರ್ಥನೆ, ಸ್ತುತಿ, ಸತಿ-ಪತಿಭಾವ, ಆರತಿ ಮುಂತಾಗಿ ವಿಂಗಡಿಸಿ ಆಯಾ ಶೀರ್ಷಿಕೆಗಳಡಿ ಸೇರಿಸಲಾಗಿದೆ.

ಒಬ್ಬನೇ ವ್ಯಕ್ತಿಯನ್ನು ಕುರಿತು ಹಲವಾರು ಕವಿಗಳು ಬರೆದ ಇಷ್ಟೊಂದು ಸಂಖ್ಯೆಯ ಸ್ವರವಚನಗಳನ್ನು ಲಿಂ. ಬುದ್ಧಯ್ಯಸ್ವಾಮಿ ಪುರಾಣಿಕ ಅವರು ಕ್ರಿ.ಶ. ೧೯೩೧ರಷ್ಟು ಹಿಂದೆಯೇ ಪ್ರಕಟಿಸಿರುವುದು ಅವರ ಸಾಹಿತ್ಯಾಸಕ್ತಿಯ ದ್ಯೋತಕ. ಈ ಬಗೆಯ ಕೃತಿಗಳು ಕನ್ನಡದಲ್ಲಿ ಬಹಳ ವಿರಳ. ಅವರು ಪ್ರಕಟಿಸಿದ್ದ ಈ ಸ್ವರವಚನಗಳನ್ನು ಪರಿಷ್ಕರಿಸಿ ಸಂಪಾದಿಸಿಕೊಡುವಂತೆ ಡಾ. ಎಂ. ಎಂ. ಕಲಬುರ್ಗಿ ಅವರ ಮೂಲಕ ನನಗೆ ಅಪ್ಪಣೆ ಕೊಡಿಸಿದ, ಸುತ್ತೂರು ಶ್ರೀಮಠದ ಪೂಜ್ಯ ಶಿವರಾತ್ರಿ ದೇಶಿಕೇಂದ್ರ ಜಗದ್ಗುರುಗಳವರಿಗೆ ನನ್ನ ಅನಂತ ಪ್ರಣಾಮಗಳು. ಹಿಂದಿನ ಜಗದ್ಗುರುಗಳ ಧ್ಯೇಯಾದರ್ಶಗಳನ್ನು ಚಾಚು ತಪ್ಪದೆ ಇನ್ನೂ ವ್ಯಾಪಕವಾಗಿ ಮುಂದುವರಿಸಿಕೊಂಡು

ಹೋಗುತ್ತಿರುವ ಇಂದಿನ ಜಗದ್ಗುರುಗಳ ವಯಸ್ಸು ಕಿರಿದಾದರೂ ಕಾರ್ಯ ಹಿರಿದು. ಇಂತಹ ಒಂದು ಸೇವೆಯ ಅವಕಾಶವನ್ನು ನನಗೆ ಒದಗಿಸಿಕೊಟ್ಟ ಪೂಜ್ಯರಿಗೆ ಮತ್ತೊಮ್ಮೆ ಶಿರಸಾಷ್ಟಾಂಗ ನಮಸ್ಕಾರಗಳು. ಲಿಂ. ಬುದ್ಧಯ್ಯ ಸ್ವಾಮಿಗಳು ಸಂಕಲಿಸಿದ ಹಾಡುಗಳನ್ನು ಪರಿಷ್ಕರಿಸಿ, ಸಂಪಾದಿಸಲು ಒಪ್ಪಿಗೆ ಕೊಟ್ಟ ಅವರ ಮೊಮ್ಮಕ್ಕಳಿಗೆ ನನ್ನ ಅಭಿನಂದನೆಗಳು. ಗ್ರಂಥವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ಸ್ನೇಹಾ ಪ್ರಿಂಟರ್ಸ್‌ನ ಒಡೆಯರಿಗೂ ಅಲ್ಲಿಯ ಸಿಬ್ಬಂದಿವರ್ಗಕ್ಕೂ ನನ್ನ ಕೃತಜ್ಞತೆಗಳು.

ಧಾರವಾಡ

ಬಿ.ವ್ಹಿ. ಮಲ್ಲಾಪುರ

# ಪರಿವಿಡಿ

❑❑❑

## ಪ್ರಾರ್ಥನಾರೂಪದ ಸ್ವರವಚನಗಳು

೧

ರಾಗ: ಸೋರಟ, ಆದಿತಾಳ

ಪಾಲಯ ಪರಮೇಶ ಪಾವನಶೀಲ ಪಾರ್ವತೀಶ
ನೀಲಕಂಠ ಮುನಿಜಾಲ ನಮಿತ ಸುವಿಶಾಲಗಾತ್ರ
ಕರಕಪಾಲ ಶೂಲಧರ ||ಪಲ್ಲ||

ಕಾಮದರ್ಪಹರಣ ಸಾಂಬ ನಿರಾಮಯ ನಿರ್ವರಣ
ಸೋಮ ವಿಶ್ವಭರಣ ಬುಧಜನಸ್ತೋಮ ನಮಿತ ಚರಣ
ಸಾಮಗಾನ ಸುಪ್ರೇಮ ಸೋಮಧರ
ಭೀಮನಾಮ ವರವ್ಯೋಮಕೇಶ ಮಾಂ ||೧||

ಮಂದರಾದ್ರಿವಾಸ ಪರಮಾನಂದ ಮಂದಹಾಸ
ಇಂದು ಕುಂದ ಭಾಸ, ಸನಕ ಸನಂದಾದಿಪೋಷ
ಸ್ಕಂವತಾತಗಣವೃಂದ ಸೇವಿತ ಘನ
ಅಂಧಕಾರಿ ಗೋವಿಂದಮಿತ್ರ ಮಾಂ ||೨||

ಭಿನ್ನ ದುರಿತಪಾಶ ವರ ಗೋಕರ್ಣಕರ್ಣಭೂಷ
ಧನ್ಯ ಶ್ರೀಜಗದೀಶ ವರದ ಸುವರ್ಣಗಿರಿನಿವಾಸ
ಸನ್ನುತಾಗಮ ಕೃಪಾರ್ಣವ, ಶಂಕರ
ಚನ್ನಶ್ರೀ ಪ್ರಭೋ ಚಿನ್ಮಯ ವರಮಾಂ ||೩||

೨

ರಾಗ: ಪೂರ್ವಿ, ತಾಳ: ದಾದರಾ

ಪಾಲಯ ಮಾಂ ನೀಲಕಂಧರ ತ್ರಿಶೂಲಧರ ||ಪಲ್ಲ||

ಪಾಲಯ ಮಾಂ ಕಾಲಹರ ಕಪಾಲಧರ ಸುನೀಲಗೊರಳ
ವ್ಯಾಲ ಮಾಲ ಲೋಲ ಕುಜನಕುದ್ದಾಲ ನಮಿತಜನಕೃಪಾಳ ||೧||

ಅಕ್ಷಯ ಅನಂಗಶಿಕ್ಷ ಪಕ್ಷಿವಾಹನಾಕ್ಷಿಪೂಜಿತ
ದಕ್ಷವರದ ಮೋಕ್ಷಘನ ಸುಪಕ್ಷ ವಿರೂಪಾಕ್ಷಲಿಂಗ ||೨||

ಸನ್ನುತ ಸಕಲೋನ್ನತಕರ ಸನ್ನುತ ಸಕಲೋನ್ನತಹರ
ಪನ್ನಗಪತಿ ಕರ್ಣಭೂಷ ಚಿನ್ಮಯ ಚನ್ನಶ್ರೀಪ್ರಭುವರ ||೩||

೩

ರಾಗ: ತೋಡಿ, ತಾಳ: ಆದಿ

ಮಾಂ ಪಾಹಿ ಕಾಮಾರಿ ಹರಶಂಕರ ತ್ರಿಪುರಾರಿ
ಕರುಣಾಕರ ಕಾಲಹರ ವರ ದಾನವನತ ಚರ್ಮಾಂಬರಧರ ||ಪಲ್ಲ||

ವಾಸವ ಬ್ರಹ್ಮ ಸುರಾರ್ಚಿತ ಚರಣ ಪಶುಪತಿ
ಸ್ಮಶಾನನಿವಾಸ ಶಂಕರ ಚಂದ್ರಕಲಾಧರ ||೧||

ಗಿರಿಜಾವದನಾಂಭೋಜ ಷಟ್ಚರಣ
ದುರಿತ ಸಂಹರ ವೃಷಭವಾಹನ ತ್ರಿಭುವನಧರ ||೨||

ಮನ್ಮನೋಮಂದಿರ ಪನ್ನಗಾಭರಣ
ಚನ್ನಶ್ರೀ ಪ್ರಭುವರ ದಕ್ಷಯಜ್ಞಸಂಹರ ||೩||

೪

ರಾಗ: ತೋಡಿ, ಆದಿತಾಳ

ಮರೆಯ ಹೊಕ್ಕೆನೋ ನಿಮ್ಮ ಮರೆಯ ಹೊಕ್ಕೆನೊ
ದುರಿತವನುತ್ತರಿಸಿ ಬೇಗ ಹರುಷದಿಂದ ಕಾಯೊ ಎನ್ನ ||ಪಲ್ಲ||

ಸತಿಯು ಸುತರು ಮಾತಾ-ಪಿತರು ಹಿತರು ಎಂಬ ಭ್ರಾಂತಿಯಲ್ಲಿ
ಸತತ ಮುಳಿಗಿದೆ ಗುರವೆ ಹಿತದಿ ಎನ್ನ ರಕ್ಷಿಸಯ್ಯ ||೧||

ಧನವು ಧಾನ್ಯವೆಂಬ ನೆನಹಿನಲ್ಲಿ ಮನವು ಸಿಲ್ಕಿತಯ್ಯಾ
ಘನವನರಿಯದೆ ಕೆಟ್ಟೆ ಚಿನುಮಯ ನೀ ಪಾಲಿಸೆನ್ನ ||೨||

ಹೊನ್ನು ಹೆಣ್ಣು ಮಣ್ಣು ಕೂಡಿ ನಿನ್ನ ಸ್ಮರಣೆ ಮರೆದೆ
ಚೆನ್ನಶ್ರೀ ಪ್ರಭು ನೀ ಭಿನ್ನವಿಲ್ಲದೆ ತವಿಸೆನಗೆ ||೩||

೫

ರಾಗ: ಮಾಲಕಂಸ, ಆದಿತಾಳ

ಕರುಣಿಸೊ ಬೇಗ ಶ್ರೀ ಪ್ರಭುರಾಯ, ನಿಮ್ಮ
ಶರಣು ಹೊಕ್ಕೆನು ನಾನು, ಪಿಡಿ ಕೈ ||ಪಲ್ಲ||

ಭ್ರಾಂತಿಗೊಂಡೆನು ತಾಪತ್ರಯದಿಂಡ
ಶಾಂತಿಮಾಡು ಎನ್ನ ತನು-ಮನ, ನೊಂದೆ ||೧||

ಕಡು ರೋಷವು ಎನ್ನೊಳುಬೇಡ
ಕಡೆಗಣ್ಣಲಿ ನೋಡಲು ಬೇಡ
ಬಡವನ ಮೇಲೆ ದಯಮಾಡು
ಮೃಡಪದ ಭಜನೆಯ ವ್ರತ ನೀಡು ||೨||

ಜ್ವರದಿಂದ ಕಂದಿತು ಈ ಕಾಯ
ಸ್ಮರಣೆ ತೋರದಿಂದಿದಕೇನುಪಾಯ
ತರಳನ ಮೇಲೆ ಮಾಳ್ಪುದು ದಯ
ವರಕರ ಚೆನ್ನಶ್ರೀ ಪ್ರಭುರಾಯ ||೩||

೬

ರಾಗ: ಭೀಮಪಲಾಸ, ಆದಿತಾಳ

ಬಿಡದೆ ಎನ್ನ ಪ್ರಭುವೆ ನೀ ಪಾಲಿಸೊ
ಕಾಡದೆ ನಿರ್ದಯಮಾಡದೆ ಎನ್ನ ಗುಣ
ನೊಡದೆ ಉದ್ಧರಿಸೊ ||೧||

ದುರಿತ ಬಾಧೆಗಳ ತರಿಸುತೆನ್ನಯ
ಪರಿಭವ ಸಂಹರಿಸೊ ||೨||

ಚೆನ್ನ ಶ್ರೀ ಪ್ರಭುವೆ ನಿನ್ನನು ನಂಬಿದೆ
ಎನ್ನಪರಾಧ ಕ್ಷಮಿಸೊ ||೩||

೭

ರಾಗ: ತೆಲಗಕಾಂಬೋದಿ, ಅಡತಾಳ

ಪಾಲಿಸೆನ್ನ ಪ್ರಭು ಅಲ್ಲಯ್ಯ ||ಪಲ್ಲ||

ಘೋರ ಭವಾರ್ಣವದಿ ಸೇರಿ ನಾ
ಸಮಯ ಪಾಲಿಸುವರಾರಿಲ್ಲವಯ್ಯಾ ||೧||

ಮುತ್ತಾ ಮನೋಹರನ ಸಖ್ಯಮಾತುಗಳನು
ಪ್ರೀತಿಸುತ್ತ ಜಗಪತಿ ಪಾದವ ||೨||

ಚೆನ್ನಶ್ರೀ ಪ್ರಭುವಿನ ಉನ್ನತ ಚರಣಕ್ಕೆ
ಭಿನ್ನ ಸ್ವೈರಿಸಲಾರೆ ||೩||

೮

ರಾಗ: ಕಲ್ಯಾಣ

ದುರ್ಗಾಧಿಪ ಪಾಹಿಮಾಂ ತ್ರಿಪುರಾರಿ ||ಪಲ್ಲ||

ತರುಣ ಶಶಿಕಲಾಭರಣ ಮೃತ್ಯುಂಜಯ
ಶರಣಾಗತಜನ ಭರಣ ||೧||

ಸುರಗಣ ಮುನಿಸೇವಿತ ಪದ ಸರಸಿಜ
ಗುರುಕುಲಾಂಬುಧಿ ಶಶಿಕಿರಣ ||೨||

ಚಿನ್ಮಯ ವರದ ಜಗನ್ನುತ ಶಾಶ್ವತ
ಚೆನ್ನಶ್ರೀ ಪ್ರಭೋ ನಿರ್ವರಣ ||೩||

೯

ರಾಗ: ಸಾಳಂಗ

ಮಲ್ಲಿಕಾರ್ಜುನ ವ್ಯಾಲಾಭರಣ ||ಪಲ್ಲ||

ಕಾಲ ಕಾಲದಿ ಅರಸಿ ನಾ ಬಳಲಿಪೆ
ಬಾಲನ ಮೇಲೆ ಮಾಡೊ ಕರುಣ ||೧||

ಕುಂಭಿನಿ ಪೊರೆವ ಅಂಬರಕೇಶನೆ
ಇಂಬಿಡು ಎನ್ನ ಹೃದಯದಿ ನಿಮ್ಮ ಚರಣ ||೨||

ಬನ್ನಬಟ್ಟೆನು ನಾನಾ ಜನ್ಮದಿ
ಚನ್ನಶ್ರೀ ಪ್ರಭುವೆ ನೀ ಕಾಯೆನ್ನ ಹರಣ ||೩||

೧೦

ರಾಗ: ಗೌರಿ

ದೇವ ಪ್ರಭುವರ ತ್ರಿಭುವನ ಬಲ್ಲ
ಕವಿಬುಧನುತಪದ ದೇವ ಪ್ರಭುವರ ||ಪಲ್ಲ||

ಕಾಲನ ಗೆಲಿದನು ಬಾಲಿಗೆ ಒಲಿದನು
ಶೂಲಪಾಣಿ [1][ತಾ][1] ಶಂಕರ ||೧||

ಕಂದುಗೊರಳ ಕಂದರ್ಪದಹನ ಶಿವ
ಇಂಧುಧರನು [1][ತಾ][1] ಕರುಣಾಕರ ||೨||

ಚನ್ನಶ್ರೀ ಪ್ರಭು ದಯಮಾಡಿ
[2][ನನಗೊಲಿಯುವಂತೆ ನೀ][2] ಅಭಯಕೊಡು ||೩||

---

೧-೧ x (ಮೂ);
೨-೨ ನಗಿಗಲಿಯುವಂತೆ (ಮೂ)

೧೧

ರಾಗ: ಹಮೀರ ಕಲ್ಯಾಣ

ಕರುಣೆಗಳರಸ ಕಾಯಯ್ಯ ನಿಮ್ಮ
ಶರಣು ಹೊಕ್ಕವನಾದೆನಯ್ಯಾ
ಧರಣಿ ಕನಕ ನಿಜತರುಣಿ ಜರಿದು ನಿಮ್ಮ
ಸ್ಮರಣೆ ಮಾಡಲು ಬೇಗ ಹರಣವ ರಕ್ಷಿಸಿ ||ಪಲ್ಲ||

ಕೃತದೋಷವಗಣಿತಗಳನು ಅಭಿ
ಹತಿಸಿ ಪಾಲಿಸುವುದೆಮ್ಮನು
ಕ್ಷಿತಿಯೊಳಗತಿ ದುಃಖಿಯುತನು, ಮಾರ-
ಜಿತ ಸತತ ಮರೆದವನು
ಯತಿ ಪ್ರ[ತ]ತಿಗೆ ಸದ್ಗತಿ-ಮೋಕ್ಷಕೊಡುವಂಥ
ಶಿತಿಕಂಠ, ನಿಮ್ಮಂಘ್ರಿ ಗತಿಯೆಂದು ಪಿಡಿದನ ||೧||

ಮದವೆಂಟುವೇಷವಾದವನ ವೇಷವಾದವನ
ಸದುಹೃದಯ ವೆಳ್ಳನಿತಿಲ್ಲದವ
ಸದನ ಸುತರತಿ ತತ್ಪರನಾ
ಮೃದುಮದಗಂಧಿಯರೊಳು ಆಡಿದವನ
ಸದಮಲಾತ್ಮಕ ನಿಮ್ಮ ವಿಧದ ಪೂಜೆಗಳಿಂದ
ಕದುಚಿ ಮಾಡದೆ ಮೈಮರೆದಪರಾಧಿಯ ||೨||

ಅನ್ಯವನರಿಯದ ಆರ್ಭಕ ನಾ
ಜ್ಞಾನಶೂನ್ಯ ಸದ್ಗುಣ ವಿರಹಿತ ನಾ
ಧನ್ಯರ ಹಳಿದ ದುರ್ಜನ ನಾ
ನೆರೆ ಮೂರ್ಖನಾದವ ನಾ
ಭಿನ್ನವಿಲ್ಲದಲೆ ಅನ್ಯೋನ್ಯ ಗುಣಂಗಳ
ತನ್ನಶ್ರೀ ಪ್ರಭು ನೋಡದಿನ್ನು ಕೃಪೆಯ ಮಾಡಿ ||೩||

## ೧೨

ರಾಗ: ಸಕಲಾಭರಣ

ಬಿಡೆ ನಿನ್ನ ಪಾದ ಕರುಣಿಸದೆನ್ನೊಳು ಕೋಪವಿದ್ಯಾಕೆ ||ಪಲ್ಲ||

ಪಸಿಯ ಚರ್ಮವ ಪೊತ್ತು ಪೊಡವಿ ತಿರು[೧][ಗಿದರು][೧]ಬಿಡೆ
ಭಸಿತವ ಪೂಸಿ ನೀ ವೇಷಧರಿ[೧][ಸಿದರು][೧]ಬಿಡೆ
ವಸುಧಿ ದಹಿಸುವ ವಿಷವ ಕುಡಿದನೆಂದರೆ, ಬಿಡೆ
ಹಸಿದು ಶಿಶುವಿನ ಕೊರಳ ಕೊಯ್ಯನೆಂದರು ಬಿಡೆ
ಕಾಡಿನೊಳು ಮನೆಮಾಡಿಕೊಂಡು ಕುಳಿತರು ಬಿಡೆ
ಬಾಣನ ಮನೆಯ ಬಾಗಿಲ ಕಾಯ್ವವನೆಂದರು ಬಿಡೆ ||೧||

ಕೌಪೀನ ಕೊಂಡು ಕೈಯಲ್ಲಿ ಕಾಸಿಲ್ಲದಿದ್ದರೂ ಬಿಡೆ
ಕಾಮಿನೀಕರದೊಳು ಕಂದನಾದರು ಬಿಡೆ
ಸೃಷ್ಟಿಯೊಳ್ ಕೆರೆಮಣ್ಣ ಹೊತ್ತವನೆಂದರೂ ಬಿಡೆ
ಸಿಂಧುಬಲ್ಲಾಳನ ಮಡದಿಯ ನಂದನಾದರೂ ಬಿಡೆ
ಇಂದು ತ್ರಿಜಗದೊಳು ತಿರುಕನೆಂದರೂ ಬಿಡೆ
ಸತ್ಯ ಶರಣರ ಮನೆಯ ತೊತ್ತಾದರೂ ಬಿಡೆ ||೨||

ಮತ್ತೆ ಮತ್ರ್ಯಾದಿ ಮಾಯ ಮರ್ದನನೆಂದರೂ ಬಿಡೆ
ಭಕ್ತ ಬಸವನ ಕರದಿ ಪರುಷನಾದರು ಬಿಡೆ
ಕೊಬ್ಬಿದ ಸುರರ ಕೊಂದವನೆಂದರೂ ಬಿಡೆ
ಕುರೂಪಿಯಾಗಿ ನೀನು ಕುಲಹೀನನಾದರೂ ಬಿಡೆ
ಭರದಿ ಭಕ್ತರ ಬಿಟ್ಟಿ ಹೊತ್ತವನೆಂದರೂ ಬಿಡೆ ||೩||

ಡೊಂಬರಚೆನ್ನಿಯ ಡೊಳ್ಳ ಬಡಿಯ ಹೋದರೂ ಬಿಡೆ
ಕುಂಬಾರನ ಮನೆಯೊಳು ಕುಣಿದವನೆಂದರೂ ಬಿಡೆ
ವಸುಧೆಯೊಳು ತ್ರಿದಳವಾಸನೆಂದರೂ ಬಿಡೆ
ಎನ್ನ ಮಂದಮತಿಯೆಂದು ನಿಂದಿಸಿದರೂ ಬಿಡೆ
ಮೋಸದೊಳೆನ್ನನು ಘಾಸಿ ಮಾಡಿದರೂ ಬಿಡೆ
ಚನ್ನಪ್ರಭುವೆ ನಿಮ್ಮ ಲೇಸು ಪಾದವ ಬಿಡೆ ||೪||

---

೧-೧ x (ಮೂ)

೧೩

ರಾಗ: ತೋಡಿ, ತಾಳ: ತ್ರಿವಿದಿ

ಕರುಣಿಸೊ ಕರುಣಾಕರ
ಮಾರಸಂಹಾರ ವೀರಭದ್ರ ವಿಜಯ ನೀ ||ಪಲ್ಲ||

ಸಾಕ್ಷೇಪದಲ್ಲಿಹ ದಕ್ಷಪ್ರಜೇಶ್ವರನ ಈಕ್ಷಿಸುತಲಿ ಭರದಿ
ವಕ್ಷ ಕಕ್ಷ ಚರ್ಮಾಕ್ಷ ಸೀಳುತ
ಶಿಕ್ಷಿಸಿ ಶಿರವರಿದೆ ||೧||

ಹಿರಣ್ಯಕಶ್ಯಪನ ಶಿರವ ಛೇದಿಸಿ ನರಹರಿ ಗರ್ವದೊಳಿರಲು
ಶರಭಾಕೃತಿಯನುಧರಿಸಿ ಸಂಹರಿಸುತ
ನರರುಘೇ ಉಘೇ ಎನಲು ||೨||

ನಿನ್ನ ಪದಾನುಜ ⁰[ನ]⁰ರನು ಬಿಡದೆ ಕಾಯ್ದು ಸಂಪನ್ನ
ಎನ್ನಬಿನ್ನಹವ ಲಾಲಿಸೊ
ಚನ್ನಶ್ರೀ ಪ್ರಭುದೇವ ||೩||

೧೪

ಪಾಲಯ ಮಾಂ ಸಾಂಬ ಜಗದ್ಭರಣ ಭವವಿದೂರ
ಶೂಲಧರ ಕಪಾಲಕರ ವಿಶಾಲಮದಸಂಹಾರ ||ಪಲ್ಲ||

ಕಮಲಜಾಂಡಕೋಟಿರಕ್ಷ ಅಮಲ ಅಷ್ಟಶರೀರ
ವಿಮಲ ಸುರಮುನೀಂದ್ರ ನಮಿತ ಮಮ ಹೃದ²[ಯವಿ]² ಹಾರ||೧||

ಶಶಿಭಾಸ್ಕರ ವಹ್ನಿನೇತ್ರ ಸ್ವಸುಖದ ಭಕ್ತೇಶ
ಪಶುಪತಿ-ವಿಷಗರಳ ಭಸಿತಭೂಷಣ ಪಾರ್ವತೀಶ ||೨||

ಸನ್ಮತ ಸಕಲಾಗಮನುತ ಷಣ್ಮುಖವರಸ್ತೋತ್ರ
ಪನ್ನಗಧರ ಚನ್ನಶ್ರೀ ಪ್ರಭು ಚಿನ್ಮಯ ಸತ್ಪಾತ್ರ ||೩||

---

೧-೧ X (ಮೂ)
೨-೨ ಮ (ಮೂ)

೧೫

ರಾಗ: ಸುಹಿಲಿ, ತಾಳ: ಬಿಲಂದಿ

ಪಾಲಿಸೆನ್ನ ನೀಲಕಂಠ ಜ್ವಾಲನೇತ್ರನೆ
ಮೂಲಮಂತ್ರ ಲೋಲಗಾತ್ರ ವ್ಯಾಲಸೂತ್ರನೆ ||೧||

ಫಾಲಾಕ್ಷ ವಿಶಾಲಜಟಾ ಶೂಲಹಸ್ತನೆ
ಕಾಲಹರ ಕಾಪಾಲಿ ವಿಬುಧಜಾಲರಕ್ಷನೆ ||೨||

ಇಂದುಶೇಖರ ಕಂದುಗೊರಳ ಬಂಧುರಾಂಗನೆ
ಮಂದಗಮನೆ ದ್ವಂದ್ವ ಕುಚದಿ ಅಂದು ನುಡಿದನೆ ||೩||

ಈಶ ಭಜಕಪೋಷ ಸ್ಮರವಿನಾಶ ವೀರನೆ
ಭಾಷೆಪಾಲಕ ದೋಷರಹಿತಾಕಾಶಕೇಶನೆ ||೪||

ಸಾಮಗಾನಪ್ರೇಮ ಪರಶುರಾಮ ವರದನೆ
ಕೋಮಲಾಂಗನೆ[ಅ]ಮರಹಿತ ಸೋಮಜೂಟನೆ ||೫||

ದಕ್ಷ, ಅಸುರಶಿಕ್ಷ, ಭಕ್ತರಕ್ಷ ಕರ್ತನೇ
ಅಕ್ಷಯ ಸುಮುಮುಕ್ಷುಜನರ ವಕ್ಷವಾಸನೆ ||೬||

ಸನ್ಮತದಲಿ ಎನ್ನ ಕಾವುದು ಮನ್ಮಥಾರಿಯೆ
ಚಿನ್ಮಯಾತ್ಮಕ ಚನ್ನಶ್ರೀ ಪ್ರಭು ಪನ್ನಗಧಾರಿಯೆ ||೭||

೧೬

ದುರುಳತನದಿ ನಿಮ್ಮ ಮರೆದು ಕೆಟ್ಟೆನಲ್ಲಮ
ತರಳನ ಅಪರಾಧಕೋಟಿ ಕ್ಷಮಿಸು ಅಲ್ಲಮ ||೧||

ತಾಮಸದಲಿ ಮುಳುಗಿ ಮುಂದುಗಾಣೆನಲ್ಲಮ
ನಾಮರಹಿತ ನಿಮ್ಮದಯದಿ ಪಾಲಿಸಲ್ಲಮ ||೨||

ವನಿತಾದಿ ವಿಷಯದಿ ಮನವು ಕರಗಿತಲ್ಲಮ
ನೆನವನಿತ್ತು ಪೊರೆವುದೆನ್ನ ಚಿನುಮಯಲ್ಲಮ ||೩||

ಹಲವು ಜನ್ಮಗಳಲಿ ಬಳಲಿ ಬಂದೆನಲ್ಲಮ
ನೆಲೆಯ ಗಾಣೆ ನಿಮ್ಮ ಮರೆಯ ಹೊಕ್ಕೆನಲ್ಲಮ ||೪||

ಮದದಿ ಸೊಕ್ಕಿ ನಿಮ್ಮ ಪದವ ಭಜಿಸೆನಲ್ಲಮ
ಕದನ ಮಾಡಿ ಸುಜನರುಗಳ ಹಳಿದೆನಲ್ಲಮ ||೫||

ಪ್ರಾಣಿಗಳ ನಿರ್ದಯದಿ ಪೀಡಿಸಿದೆನಲ್ಲಮ
ಮಾಣದೆ ಶಿವರೂಪ ಕಂಡು ನಮಿಸೆನಲ್ಲಮ ||೬||

ನಿನ್ನ ಸ್ಮರಣೆ ಎನಗೆ ಎಂದಿಗೂ ಇರಲಿ ಅಲ್ಲಮ
ಚನ್ನಶ್ರೀಪ್ರಭು ಎನ್ನ ಬಿಡದೆ ಕಾಯ್ವುದಲ್ಲಮ ||೭||

೧೭

ಪಾಹಿ ತ್ರಿಪುರಾರಿ ಶಂಭೋ ಶಶಿಕಲಾಧಾರಿ ||ಪಲ್ಲ||

ಆಗಮಸನ್ನುತ ನಿಗಮ ಸಂಚಾರಿ
ನತಜನ ಅಘಸಂಹಾರಿ ||೧||

ಸುರಮುನಿವಂದಿತ ಕರುಣಾಕಾರಿ
ಮರಣ ಜನನ ಭಯಹಾರಿ ||೨||

ಚಿನ್ಮಯರೂಪ ಸಜ್ಜನಸಾಕಾರಿ
ಚನ್ನಶ್ರೀ ಪ್ರಭು ವಿಶ್ವಾಧಾರಿ ||೩||

೧೮

ಪುರಜಿತ, ಶರಣವರದ, ಮಾಂ ಪಾಹಿದೇವ ||ಪಲ್ಲ||

ವಿಭುದಜನಾರ್ಚಿತ ತ್ರಿಭುವನಪಾಲ
ನಭಮಣಿ ಶಶಿವಹ್ನಿನಯನ ಗಿರಿಜೆ ಸಂಜೀವ ||೧||

ಸ್ಮರಸಂಹಾರ ದುರಿತ ವಿನಾಶ
ಪರಿಹತ ಮಾರ್ತಾಂಡತನಯ ನಿರ್ಗತ ಭಾವ ||೨||

ಸನ್ಮುನಿಪೂಜಿತ ಪನ್ನಗಭೂಷ
ಚೆನ್ನಶ್ರೀ ಪ್ರಭು ವರಕರ, ದುರ್ಭವಸಾಗರನಾವ ||೩||

೧೯

ರಾಗ: ತೋಡಿ

ಪಾಹಿ ದಿಗಂಬರಿ ನತಜನಭವಭಯ ಸಂಹಾರಿ ||ಪಲ್ಲ||

ಉಕ್ಷವಾಹನ ಕಂಬಳಧಾರಿ
ಶ್ರೀಘ್ರಮಾಂ ಪ್ರತಿಕೃಪಾಕಾರಿ ||೧||

ಅಕ್ಷಯ, ಸಾಂಬ, ರುದ್ರಾಕ್ಷವಿಭೂಷ
ದಕ್ಷಮರ್ದನ ವರಮಹೇಶ ||೨||

ಮನ್ಮಥಹರ ಸಕಲೋನ್ನತ ಈಶ
ಚೆನ್ನಶ್ರೀ ಪ್ರಭು ಸರ್ವೇಶ ||೩||

೨೦

ಮಹಾಲಿಂಗಪುರನಿವಾಸ
ಮಹಾಲಿಂಗ ಪಾಹಿಮಾಂ
ಮೋಹನಾಶ ಮುನಿಜನ ಹೃದ್ವೇಶ
ದೇಹರಹಿತ ಭೋ ||ಪಲ್ಲ||

ಕಮಲಜಶಿರಕಮಲಪಾತ್ರ, ಕಮಲಾಪ್ತಸುನೇತ್ರ
ಕಮಲಾಪತಿನೇತ್ರ, ಕಮಲಪೂಜಿತಪದ ಪಾತ್ರ ||೧||

ಅಕ್ಷಯ ರುದ್ರಾಕ್ಷ ಶ್ರೀರಕ್ಷಭೂಷಿತಾಂಗ
ತ್ರ್ಯಕ್ಷ, ಸಹಸ್ರಾಕ್ಷತನಯರಕ್ಷ, ಹತಾನಂಗ ||೨||

ಚಿನ್ಮಯ ಮಹಿಮೋನ್ನತಕರ ಸನ್ಮುನಿ ಸಂರಕ್ಷಕ
ಚೆನ್ನಶ್ರೀ ಪ್ರಭು ಮನ್ಮನಜಲಜನಿವಾಸ ದಕ್ಷ ||೩||

೨೧

ಪಾಲಿಸೊ ಪ್ರಭುರಾಯ ಬಾಲನ ಮೇಲೆ ಮಾಡೋ ದಯ ||ಪಲ್ಲ||

ನಿಂದಕ ಜನರುಗಳಿಂದಲಿ ಬಹಳ
ಕಂದಿ ಕುಂದಿತು ಎನ್ನಯ ಕಾಯ ||೧||

ಮರಣ ಜನನಗಳೊಳು ಭರದಿ ನಾ ನೊಂದೆ
ಕರುಣಿಸೆನಗುಪಾಯ [೧][ದಯದಿ ನೀ ತಂದೆ][೧] ||೨||

ನಿನ್ನ ನಂಬಿದೆ ನಾ ಮನ್ನಿಸೋ ದಯದಿ
ಚನ್ನಶ್ರೀ ಪ್ರಭು ನೀನು ನಿರ್ಮಾಯ ||೩||

೨೨

ರಾಗ: ಸೋರಟ

ಪಾಲಿಸೊ ಪ್ರಭುರಾಯ ಎನ್ನ ||ಪಲ್ಲ||

ವೇದ ನಾಲ್ಕು ನಿಮ್ಮ ಪಾದವ ಪೊಗಳಲು
ಭೇದ ತಿಳಿಯದು ನಿರ್ಮಾಯ ನಿನ್ನ ||೧||

ತಿಳಿದು ಸಕಲ ಮುನಿಗಳು ಅರ್ಚಿಸುತಲಿ
ಕಳೆದರು ದುರ್ಭವಭಯ ಮುನ್ನ ||೨||

ನಿನ್ನ ನಂಬಿದವರ ಬನ್ನಬಡಿಸಿದಲೆ
ಚನ್ನಶ್ರೀ ಪ್ರಭು ಮಾಡೊ ದಯ ಇನ್ನ ||೩||

೨೩

ಜಯ ಜಯ ಗಣನಾಥ ಭಯಹರ ಸುಖದಾತ
ದಯಾಳು ಸುಪುನೀತ ನಯವಿನಯ ವಿಖ್ಯಾತ ||ಪಲ್ಲ||

ಗಜಮುಖ ಸುಂದರ ಅಜನುತ ಗಂಭೀರ
ತ್ರಿಜಗದ್ವಿಹಾರ ಭಜಕಭಯಸಂಹಾರ ||೧||

ಅಹಿಪತಿಕೃತಭೂಷ ಮಹಿಮಪ್ರಕಾಶ
ಬಹುವಿಘ್ನವಿನಾಶ ಮಹಾಗುಣಗಣಕೋಶ ||೨||

---

೧-೧ x (ಮೂ)

ಚಿನ್ಮಯ ಸುದಯಾಳ ಉನ್ನತ ಗುಣಶೀಲ
ಸನ್ನುತ ಸುರಜಾಲ ಚನ್ನಶ್ರೀ ಪ್ರಭುಲೋಲ ||೩||

೨೪

ಪಾಲಿಸುಗೆಮ್ಮನು ಶ್ರೀ ಪ್ರಭುದೇವಾ ||ಪಲ್ಲ||

ನೀಲಕಂಧರ ಕರಿಕಾಲಸಂಪ್ರೀತ
ಫಾಲಲೋಚನ ಸುರಜಾಲನಮಿತ ||೧||

ಕದ್ರುಜಭೂಷ ದಾರಿದ್ರ್ಯವಿನಾಶ
ಕದ್ರುನಿವೇಶ ಶ್ರೀರುದ್ರ ಸರ್ವೇಶ ||೨||

ಚಿನ್ಮಯ ವರದ ಜಗನ್ನುತ ಈಶ
ಚನ್ನ ಶ್ರೀ ಪ್ರಭು ಪರಿಪೂರ್ಣ ಮಹೇಶ ||೩||

೨೫

ಪಾರ್ವತೀಶ ಪಂಚಾನನ ಪದ್ಮಜವಂದ್ಯ ಗಿರೀಶ ತೂ ಕಾಮಾರೆ
ಮುನಿಜನಮಾನಸ ವಿಹಾರೆ ಷಣ್ಮುಖತಾತ ವಿಬುಧಜನ ಸಾಕಾರೆ||೧||

ನಿನ್ನ ಪದವ ನಂಬಿದೆ ಬಿಡದೀಗಲೆ
ಎನ್ನಮೇಲೆ ಕೃಪೆ ಮಾಡುವುದು
ಎನ್ನ ನುಡಿಯ ಲಾಲಿಪುದು
ಭೃತ್ಯರ ಗುಣ ನೋಡದೆ ನೀ ಪಾಲಿಪುದು ||೨||

ಬಹಳದಣಿದೆ ಸತಿಸುತರ ಮೋಹದಿ
ಸುಖ-ದುಃಖಗಳಲಿ ನೊಂದು
ಹಲವು ಜನ್ಮದಲಿ ಬಂದು
ನೆಲೆಯನರಿಯೆನು ಪಾಲಿಸೈ ನೀ ಬಂದು ||೩||

ಚಿನುಮಯ ನಿಮ್ಮ ಭಜಿಪೆನೆನಲೊಂದು
ಸ್ಥಾನದಿನಿಲ್ಲದೀ ಮನವು
ತೋರಗುಡದು ನಿಮ್ಮ ನೆನವು
ಫಳಿಸುತ ತಿರುಗುವುದು ಬಹಳ ಧನವು ||೪||

ಇನ್ನು ನಿಮ್ಮ ಪಾದ ಪೂಜಿಸಿ ಬೇಡುವೆ
ಸನ್ಮತದಿಂದ೧[ಲಿ ಸು]೧ ಗತಿಯ ಪಾಲಿಸೆನಗೆ
ಸನ್ಮತಿಯ
ತೋರಿಸು ಚನ್ನಶ್ರೀ ಪ್ರಭು ನಿಮ್ಮ ಪದ್ಧತಿಯ ||೫||

೨೬

ಈಶ್ವರನೆ ನಾ ಸರ್ವಾಪರಾಧಿ ||ಪಲ್ಲ||

ಭಸ್ಮಾಸುರಹರ ವಿಶ್ವಂಭರಧರ
ಬಿಸಿಗಣ್ಣನೆ ತಾಳಲಾರೆ ಕಾಲನಬಾಧೆ ||೧||

ಸಿಟ್ಟಲಿ ದಕ್ಷನ ಕುಟ್ಟಿದೆ ಶಿರವ
ಮೆಟ್ಟಲಾರೆ ಜನನದ ಹಾದಿ ||೨||

ಮುನ್ನ ಮಾಡಿದ ಸುಕೃತದಿಂದ ನಾನಿಮ್ಮನು ಕಂಡೆ
ಚೆನ್ನಶ್ರೀ ಪ್ರಭುವೆ ಕಾಯೆನ್ನ ಬೇಗದಿ ||೩||

೨೭

ರಾಗ: ಸಾವೇರಿ

ಪಾಲಿಸುವುದು ಬಿಡದೀ ಲೋಕದೊಳಗೆನ್ನನು
ಕಾಲಮರ್ದನ ಕರುಣಾಳು ದಯಾರ್ಣವ
ಫಾಲನೇತ್ರ ಫಣಿಶೂಲಹಸ್ತ ಕರಿ
ಕಾಲ ಚೋಳವರದ ಈಶ ರುದ್ರೇಶ ||ಪಲ್ಲ||

ಬಳಲಿದೆ ಬಹುಜನ್ಮಗಳಲಿ ದುಃಖದಿಂದ
ತೊಳಲಿದೆ ಗತಿ ಕಾಣದಳಲಿದೆ ಎನ್ನನಿಂತು
ಛಲವ ಮಾಡುವರೆ ನಿಃಕಲಮೂರ್ತಿ ಬಡವನೊಳ್
ಒಲಿದು ಹರುಷದಲಿ ಸಲಹುದೆಮ್ಮ ಪರ-
ಚಲನರಹಿತ ಗುರು ಲೋಲ ಮಹೇಶ್ವರ ||೧||

---

೧-೧ ಲೆಸ (ಮೂ)

ಮಂಡಲದೊಳಗಾದಂಡಧರನಿಂ ಭಯ-
ಗೊಂಡ ಮುನಿಪತಿ ಮಾರ್ಕಂಡೇಯನಂ ಪೊರೆದು
ದ್ದಂಡ ಚಂದ್ರಾನಲ ಮಾರ್ತಾಂಡನೇತ್ರ
ದಂಡಿತಮದನ, ಪ್ರಚಂಡ ಪೂರ್ವಾಸುರ
ಖಂಡಿತ, ಪರಮಶ್ರೀ ಪಾಂಡುರಂಗನು ತಾ ||೨||

ತರಳನಪರಾಧವ ನೀನಿರದೆ ಎಣಿಸುವರೆ
ಕರುಣೆಗಳರಸ ಬಿರುದ ಬಿಸುಟ್ಟುವರೆ
ಪರಿಪರಿಯಲಿ ಒರ[೧][ಲ್ದೊರಲ್ದು][೧]ಬೇಡುವೆ ನಿಮ್ಮಾ
ಚರಣಸೇವೆಯೊಳ್ ಮನವಿರಿಸಿ ರಕ್ಷಿಸೆನ್ನ
ಪರಮವರದ ಗುರು ಚೆನ್ನ ಶ್ರೀಪ್ರಭುವರ ||೩||

೨೮

ರಾಗ: ಧನಾಶ್ರೀ

ನಂಬಿದೆ ನಾ ನಿನ್ನ ಚರಣವ ಜಗ-
ದಂಬೆ ಕಾಯೆನ್ನ ಹರಣವ ||ಪಲ್ಲ||

ಹಲವು ಜನ್ಮಗಳಲಿ ಬಂದೆ ಒಂದು
ನೆಲೆಯ ಗಾಣದೆ ಅತಿ ನೊಂದೆ ಎನ್ನ
ನೊಲಿದು ರಕ್ಷಿಸುವುದು ಇಂದೆ ||೧||

ಮಾತಂಗಹಿತಪಾತ್ರೆ ವರ-
ನೂತನ ಕೋಮಲಗಾತ್ರೆ ಜಗತ್
ಖ್ಯಾತ ಪರಮಪಾವಿತ್ರೆ ||೨||

ಪನ್ನಗಧರ ವರಶಕ್ತಿಸಂ-
ಪನ್ನೆ ದುರ್ಗುಣವಿರಕ್ತೆ ಗುರು
ಚನ್ನಶ್ರೀ ಪ್ರಭುಧ್ಯಾನಯುಕ್ತೆ ||೩||

---

೧-೧ ಒರದೂರ ಮ್ದ(ಮೂ)

೨೯

ರಾಗ: ಜಂಗಲಾ

ತ್ವರಿತದಿ ಬಾ ಪ್ರಭುಲಿಂಗ
ಧರಸುಭುಜಂಗ, ಧೃತಗಂಗಾ
ಪರಿನತಜನ ಹೃತ್ಕುಂಜ ಸುಭೃಂಗಾ ||ಪಲ್ಲ||

ಜನ್ಮದಿ ಬಂದು ಅತಿನೊಂದು ನಂಬಿದೆ
ನಿನ್ನ ಚರಣವನಿಂದು, ಸಲಹೆಂದು ||೧||

ಧನಸುತರೆಲ್ಲ ತನಗಿಲ್ಲ ವನಿತೆಯರ
ಸಂಗವಿದಲೆ ಭಂಗ, ಹೊಲ್ಲ, ಸುಖವಿಲ್ಲ ||೨||

ಹರುಷದಿ ನೋಡೋ ಮಾತಾಡೋ
ವರಕರ ಚನ್ನಶ್ರೀ ಪ್ರಭು ದಯಮಾಡೋ ಒಡಗೂಡೋ ||೩||

೩೦

ರಾಗ: ದರಬಾರಿ

ಎನ್ನೊಡೆಯ ಶಂಕರದೇವ ದೇವ ದೇವ ||ಪಲ್ಲ||

ತಡೆಯದೆ ಎನ್ನ ಬಡನುಡಿಯ ಲಾಲಿಸೊ
ಕಡಿ ನೀ ಬೇಗೆನ್ನ ದುರ್ಭವ ಭವ ಭವ ||೧||

ದುರುಳತನದಿ ನಿಮ್ಮ ಸ್ಮರಣೆ ಮಾಡದಲೆ
ಮರುಳುಗೊಂಡಿತು ಎನ್ನ ಜೀವ ಜೀವ ಜೀವ ||೨||

ಸನ್ಮತದಿಂದಲಿ ಎನ್ನ ರಕ್ಷಿಸೊ ನೀ
ಚನ್ನಶ್ರೀ ಪ್ರಭು ಪರಶಿವ ಶಿವ ಶಿವ ||೩||

೩೧

ರಾಗ: ಸೋರಟ

ಧೀರಾನಂದಗುರೋ ಮಾಮ್‌ಪಾಲಯ ||ಪಲ್ಲ||

ವಾರಿಜಾಪ್ತ, ಶಶಿ, ಪಾವಕಲೋಚನ
ವಾರಣದಾನವದಾನ ವಿಮೋಚನ ||೧||

ಸ್ಮರಮದಭೂಧರ ಕುಲಿಶ ಕೃಪಾಕರ
ಸ್ಮರ ೧[ಣಾ]೧ ನಂದಾಬ್ಧಿ ನಿಶಾಕರ ||೨||

ಪನ್ನಗಾರಿಧ್ವಜಮಿತ್ರ ನಿರಂಜನ
ಚೆನ್ನಶ್ರೀ ಪ್ರಭು ತಾರಕಭವಭಂಜನ ||೩||

೩೨

ಎನ್ನ ಕರುಣಿಸು ಪನ್ನಗಧರನೆ ಎನ್ನ ಕರುಣಿಸ್ಯೆ ||ಪಲ್ಲ||

ಧರಣೀಧರ ಮಂದಿರ ವಿಷಕಂಧರ
ತರಣಿ ಪಾವಕನೇತ್ರ ಚಂದಿರ ||೧||

ಸಾಮಜಾಸುರದರ್ಪವಿದಾರಣ
ರಾಮವಿಲೋಚನ ಕಾಮವಿದೂರ ||೨||

ಅನ್ಯಮತವಾರಣ ಪಂಚಾಸ್ಯನೆ
ಚೆನ್ನಶ್ರೀ ಪ್ರಭುರಾಯ ಮನೋಹರ ||೩||

೩೩

ಕರುಣಾಸಾಗರ ಮರಣವಿದೂರ ಶಂಕರ ||ಪಲ್ಲ||

ತಾರಕಾರಿಯ ಪಿತ
ಮಾರಜನಕನ ಮಿತ್ರ
ಭಾರತೀಧವಶಿರಧೃತ ||೧||

ನಾದ ಬಿಂದು ಕಲಾತೀತ
ಸಾಧು ಸಜ್ಜನ ಪ್ರೀತ
ಭೇದ ವಿಭೇದ ವರ್ಜಿತ ||೨||

ಶೂನ್ಯ ನಿಃಕಲ ಪ್ರಖ್ಯಾತ
ಎನ್ನ ರಕ್ಷಿಸು ನಾ ಅನಾಥ ||೩||

---

೧-೧ ತಾ ಮಾ(ಮೂ)

೩೪

ರಾಗ: ಸಾವೇರಿ

ಪಾಲಿಸೊ ಪಾಲಿಸೊ ಎನ್ನ
ನೀಲಕಂಧರ ಮುನ್ನ
ಬಾಲಚಂದ್ರಧರನೆ ಪುರಹರನೆ ||ಪಲ್ಲ||

ತರುಣತನದಿ ನಿಮ್ಮ ಮೊರೆಯ ಹೊಕ್ಕೆನೊ ದೇವ
ಕರುಣದಿಂದಲಿ ಕಾಯ್ದುದು ಪೊರೆವುದು ||೧||

ಬಡವನೆಂದೆನ್ನನು ಕಡೆಗೆ ನೂಕದೆ ನೀನು
ಒಡೆಯ ಪಾಲಿಪುದೀಗಲೆ, ಬೇಗದಲೆ ||೨||

ಎನ್ನವಗುಣಗಳ ಮುನ್ನ ನೋಡದೆ ನೀನು
ಚನ್ನಶ್ರೀ ಪ್ರಭು ರಕ್ಷಿಸೊ, ಅಘಶಿಕ್ಷಿಸೊ ||೩||

೩೫

ದೇವ ಪ್ರಭುವರ, ತ್ರಿಭುವನ ಪಾಲಕ
ವಿಬುಧನುತಪದ ದೇವ ಪ್ರಭುವರ ||ಪಲ್ಲ||

ಕಾಲನ ಗೆಲಿದನೆ ಬಾಲೆಗೆ ಒಲಿದನ
ಶೂಲಪಾಣಿ ಶಂಕರ ||೧||

ಕಂದುಗೊರಳ ಕಂದರ್ಪದಹನ ಶಿವ
ಇಂದುಧರನೆ ಕರುಣಾಕರ ||೨||

ಚೆನ್ನಶ್ರೀ ಪ್ರಭು ದಯಮಾಡೆನಗೀಗಲೆ
ಉನ್ನತ ಅಭಯಕರ ||೩||

## ಮಹಿಮಾ ಸ್ತುತಿರೂಪದ ಸ್ವರವಚನಗಳು

೧

ರಾಗ: ಭೈರವಿ, ಆದಿತಾಳ

ಶಶಿಕಲಾಭೂಷ ಪಶುಪತಿ ಸರ್ವೇಶ
ಸ್ಮಶಾನಮಂದಿರವಾಸ ವಿಷಕಂಠ ಮಹೇಶ ||೧||

ಕರಿದನುಜವಿಭಂಗ, ಪರಿಪೂರ್ಣ ಕೃಪಾಂಗ
ದುರಿತತಮ ಪತಂಗ ಪುರಹರ ಧವಳಾಂಗ ||೨||

ಮನ್ಮಥಮದನಾಶ ಪನ್ನಗಪತಿ ತಿಭೂಷ
ಚಿನ್ಮಯ ಜಗದೀಶ ಚೆನ್ನಶ್ರೀ ಪ್ರಭುಈಶ ||೩||

೨

ರಾಗ: ಭೈರವಿ, ತಾಳ: ಆದಿ

ಧುರಕೃತೇಶ ಸುರಪಥಕೇಶ
ಹರಿಸುತಪೋಷ ವರಜಗದೀಶ ||೧||

ಧರಸುರಸಂಗ ವರದ ಕೃಪಾಂಗ
ಪರತರಲಿಂಗ ಅಸುರಮದ ಭಂಗ ||೨||

ಛಿನ್ನ ಸಂತಾಪ ಮನ್ಮನೋದೀಪ
ಚೆನ್ನಶ್ರೀ ಪ್ರಭುವರ ಚಿನ್ಮಯರೂಪ ||೩||

೩

ರಾಗ: ದೇಶ, ತಾಳ: ತ್ರಿತಾಳ

ಸ್ಮರಸಾಂಬಂ ಉಮಾವರಂ
ದುರಿತವನಜ ರಜನೀಕರಂ ||ಪಲ್ಲ||

ಇಂದ್ರಾದಿಕಸುರನಮಿತಂ ಉದಾರಂ
ಚಂದ್ರಾಂಕಿತ ಸುಜಟಾಧರಂ ||೧||

ಪರಿಜಿತಕಾಲಂ ಅನಂಗಸಂಹಾರಂ
ಹರನಿಂದಾತ್ಮಜ ಕಂಧರಂ ||೨||

ಸನ್ನುತವೇದ ಮಗೇಂದ್ರವಿಹಾರಂ
ಚನ್ನಶ್ರೀ ಪ್ರಭು ಮತ್ ಸರ್ವಂ ಪರಂ ||೩||

೪

ರಾಗ: ತೆಲಗಕಾಂಬೋದಿ, ಆದಿತಾಳ

ಶ್ರೀ ನಿನ್ನ ಮಹಿಮೆ ಅಗಾಧ ಶ್ರೀ ಪ್ರಭು
ಸನ್ಮತಿ ಸುಜನ ವಿನೋದ ||ಪಲ್ಲ||

ಅರವಿಂದಾತ್ಮಜನರಸಿ ನಿಮ್ಮಯ ಪದ
ಸರಸಿರುಹವ ಕಾಣದೆ ಹೋದ ||೧||

ಶಾರದೆ ನಿಮ್ಮ ಉದಾರ ಮಹತ್ವವ
ಬರೆಯಲು ಸಿಲ್ಕದು ಬೋಧ ||೨||

ಚನ್ನಪ್ರಭು ನಿಮ್ಮನಿನ್ನು ಪೊಗಳಲು ಆ
ಪನ್ನಗೀಶನು ಬೆರಗಾದ ||೩||

೫

ರಾಗ:ಭೂಪ, ತಾಳ:ಆದಿ

ಕಂಡೆನು ಕರುಣಸಾಗರನ ||ಪಲ್ಲ||

ಕುಂಡಲಭೂಷಣ ಅಖಂಡ ಸೇವಿತನ
ಖಂಡಶಶಿಕಲಾಧರನ ||೧||

ಸುರಮುನಿವಂದಿತ ಚರಣಕಮಲನ
ಜನನ ಮರಣ ವಿದೂರನ ||೨||

ಸ್ವರ್ಣಾಧಿಧರಸಖನುನ್ನತ ಕರುಣ
ಚನ್ನಶ್ರೀ ಪ್ರಭು ಕಿಂಕರನ ||೩||

೬
ರಾಗ: ಕಾಫಿಜಿಲ್ಲಾ, ತಾಳ:ಝಂಪಾ

ಸಾಂಬ ಸುಖಪ್ರದಾಯಕ ವಿಭೋ ಗಣನಾಯಕ ಶಿವ ||ಪಲ್ಲ||

ಪಾಲಯ ಮಾಂ ಪುರಂಧರನುತ ವೀರ
ಭಾಳಲೋಚನ ಬಹು ಉದಾರ ||೧||

ಕರುಣಾಕರ ಸುರಮದಸಂಹಾರ
ಶರಣಾಗತಜನ ಉದ್ಧಾರ ||೨||
ಚೆನ್ನಶ್ರೀ ಪ್ರಭುವರ ಪನ್ನಗಧರ
ಮನ್ಮನೋ ಚಿಂತಾಹರ ||೩||

೭
ರಾಗ: ಕಾಂಬೋದ

ಎಂತು ವರ್ಣಿಸಿ ಪೇಳ್ವೆ ನಾನು
ಕಂತುಮರ್ದನಪ್ರಭು ಅಪ್ರತಿಮನ
ಶಾಂತ ಸದ್ಭಕ್ತರ ಚಿಂತಿತಾರ್ಥವನಿತ್ತು
ಸಂತಸದಲಿ ಅವರಂತರಂಗದಲಿಹನ ||ಪಲ್ಲ||

ಒಲಿದಭಕ್ತರ ಬಾಲನಾದನು
ಕುಲ ಛಲ ನೆಲೆಗಳ ಬಿಟ್ಟಾತನು
ಹಲವು ಕಾಲದಲ್ಲರಸಿದ ಅಜಹರಿಗಳು
ನೆಲೆಯ ಕಾಣದೆ ನಾಚಿದರೆ ಕಂಡು ನಗುವನ ||೧||

ಮೂರು ಪುರವ ಸುಟ್ಟಾತನ
ಧೀರ ಕಾಲನನಿಟ್ಟೊರಸಿದನ
ಆರುಗುಣಂಗಳಿಗತೀತನಾಗಿ
ನಿರಾಳ ಸ್ವಯಂಭು ತಾನಾಗಿ ವರ್ತಿಪನ ||೨||

ಸನ್ನುತ ಶರಣರೊಂದಿತನ ಎನ್ನ ಹೃದಯನಳಿನಧೀಶನ
ಹೊನ್ನ ತ್ರಿದಳವಾಸ ಪನ್ನಂಗಧರ ಮೋ
ಹನ್ನಸುಗುಣ ರನ್ನಚೆನ್ನಶ್ರೀ ಪ್ರಭುವಿನ ||೩||

೮

ರಾಗ: ಕಲ್ಯಾಣ

ಪ್ರಭುವೆ ನೀನಹುದಹುದು ಪ್ರಭುವೆ ನೀನಹುದಹುದು
ಪ್ರಭುವೆ ನೀನಹುದಹುದೆ
ತ್ರಿಭುವನಕೆ ಸಮವಾರ್ತಿ ಪ್ರಭೆ ಪಡೆದ ಸತ್ಕೀರ್ತಿ ||ಪಲ್ಲ||

ನೀರಮೇಲಣ ಮಿಂಚಿನೊಳೊಪ್ಪುವ ಎಳೆಯ ಪ್ರಭುವೆ ನೀನಹುದಯ್ಯ
ಸರಿತ್ ಸೋಂಕದೆ ಮಹಾಪಾಲಿಪ ಬಾಳೆಯ ಪ್ರಭುವೆ ನೀನಹುದಯ್ಯ
ಘಳಿಗೆತ್ತಾದೆ ಘನವು ದೂಳಿಗಳಿಂದಾದಿ ಪ್ರಭುವೆ ನೀನಹುದಯ್ಯ
ಅಖಿಲ ಬ್ರಹ್ಮಾಂಡಗಳೊಂದೊಂದು ಹೊಂದೆನೆ ಪ್ರಭುವೆ ನೀನಹುದಯ್ಯ ||೧||

ದರಿಹಸಿದು ಕರಮುಗಿದು ಬೆರಸಿ ಬೇರ ಒರಸಿದಂತೆ ಪ್ರಭುವೇ ನಿನಹುದಯ್ಯ
ಸರಸಮುಚಿತವಹ ಕುರುಹನು ತೋರುತಿಹ ಪ್ರಭುನೀನಹುದಯ್ಯ
ಪರಿಮಳವಿಡಿದಿರ್ದ ಕರ್ಪುರವಳಕಿನಂದದಿ ಪ್ರಭುವೆ ನೀನಹುದಯ್ಯ ||೨||

ಜಗದಕೋಟೆಯಿಂದೊಗೆತೋರ್ಪ ಕಾರಣಪ್ರಭುವೆ ನೀನಹುದಯ್ಯ
ಧರ್ಮಗುರುವಿಂದಾರ್ಕ,ಅಘಹರಾಮೃತಸಾರ ನೀನಹುದಯ್ಯ
ವಿಗವಷ್ಟವರ್ಗದೊಳರಿದು ತೋರ್ಪಾಕಾರಪ್ರಭುವೆ ನೀನಹುದಯ್ಯ
ಪನ್ನಂಗಮಗುಟಲಂಕಾರ ಮಗೆ ಅಲ್ಲಮ ಚನ್ನಪ್ರಭುನೀನಹುದಯ್ಯ ||೩||

೯

ರಾಗ: ಸಾರಂಗ

ಜಯ ಜಯ ಜಯದೇವ ಮಹಾದೇವ
ಜಯ ತ್ರಿಭುವನ ಸಂಜೀವ ||ಪಲ್ಲ||

ರವಿ ಶಶಿ ಹವಿನೇತ್ರ ವಿಚಿತ್ರ
ಕರುಣಾಕರ ಶುಭಗಾತ್ರ ||೧||

ಸುರುಚಿರ ಧವಲಾಂಗ ಸ್ಮಿತಸಂಗ
ಸುಂದರಮದನವಿಭಂಗ ||೨||

ಮನ್ಮಥಮದನಾಶ ಮಹೇಶ
ಚನ್ನಶ್ರೀ ಪ್ರಭು ಜಗದೀಶ ||೩||

೧೦

ರಾಗ: ಸಾರಂಗ, ತಾಳ: ಆದಿ

[೧][ಪಾಹಿಮಾಂ][೧] ಗಿರಿಜಾವರ ತ್ವಂ ||ಪಲ್ಲ||

ಸಾಮಗಾನಪ್ರಿಯ ಸೋಮಕಲಾಧರ
ಭೀಮ ತ್ರಿಪುರಸಂಹಾರ ||೧||

ಸ್ಮರಮರ್ದನ ಸುರಗಿರಿವರಮಂದಿರ
ಸರಸಿಜಭವಶಿರಕರ ||೨||

ಸನ್ಮುನಿಯುತ ಗೋಕರ್ಣಭೂಷ ಪರ
ಚನ್ನಶ್ರೀ ಪ್ರಭುಶಂಕರ ||೩||

೧೧

ರಾಗ: ಕಾನಡಾ, ತಾಳ: ಚೌತಾಳ

ಹರ ಕಾಲಭಂಜನ ಶಂಕರ ಶಶಿನಯನ
ಸಜ್ಜನ ಉದ್ಧಾರ, ಮಾರಸಂಹಾರ ಪ್ರಭುವರ
ಸುರಜಾಲಪಾಲ ಗಗನಸರಿತ ಶೋಭಿತಾಂಗ ||೧||

ಪಶುಪ ಶ್ರೀ ಗಿರಿಚಾಪ ಸ್ಮಶಾನವಾಸ
ಹಿತಕಾರಿ ದೇವಭಾವ ಪ್ರಕಾಶಕರ ನಿಜಾನಂದ
ಕರಕಪಾಲ ಗಾನವಿಲೋಲ ಸುಚನ್ನಶ್ರೀ ಪ್ರಭು ||೨||

---

೧-೧ ಮಾಮವ (ಮೂ)

೧೨

ತಾಳ: ಝಂಪಾ

ಕಂಜಭವಮುಖ್ಯ ಸುರವೃಂದಸೇವಿತಪಾದ
ಮಂಜುಳ ಮೋಹಿನಿಯ [1][ನಯನಾ][1] ಬ್ಜಶಶಿ
ಧರ ಮಹಾ ಪ್ರಭುವಖಿಲಲೋಕ ಹಿತಕರ ದೇಶಿಕ ||ಪಲ್ಲ||

ಪೃಥ್ವಿ ಜೀವನ ತೇಜ ಮರುತ ಗಗನೇಂದು ರವಿ
ಆತ್ಮಾಷ್ಟ ಮೂರ್ತಿಶರಣ ಜನಮಂದಾರ
ಶಿತಿಕಂಠ ಮನುಮುನಿಜನಾರ್ಚಿತ ಪದಾಬ್ಜಯುಗ
ನತಜನ ಜನನ ಮರಣ ಸಂಹಾರಕ ಮಹಾ ||೧||

ಅಂಗಜಮದಗಿರಿವಜ್ರ ಭೃಗು ಮುಖ್ಯಮುನಿವಂದ್ಯ
ಗಗನಮಣಿ ಶಶಿವಹ್ನಿನೇತ್ರ ಪಾತ್ರ
ನಿಗಮನುತ ಪದಪದ್ಮ ಅಘವನಧಿ ಒಡಬಾ[ಗ್ನಿ]
ಜಗಸಾಕ್ಷೀಭೂತ ಪರಿಪೂರ್ಣ ವರಘನ ಮಹಾ ||೨||

ಮಾಯಾಗಜಕಂಠೀರವ ದೇಹವಿರಹಿತ ಪರಮ
ಕಾಯಜಾರಣ್ಯದಾವಾಗ್ನಿ ಸುಜ್ಞಾನಕರ
ದೇಹಿ ಭವದಂಘ್ರಿ ಪೂಜನಮನಿಶ ಮಮ ಕರುಣೋ
ಪಾಯರೂಪಕ ವರದ ಚನ್ನಶ್ರೀ ಪ್ರಭು ಮಹಾ ||೩||

೧೩

ಮಾರಾರಿ, ತಾರಿ, ಕೈವಾರಿ ಸಕಲಭಯಹಾರಿ ಸಾಕಾರಿ ||ಪಲ್ಲ||

ಮಾಯಾಮರ್ದನ ಸರಮುನಿವಂದಿತ
ಶರಣಜನವೃಂದ ಹಿತಕಾರಿ ||೧||

ಫಾಲಲೋಚನ ಖಲಜನನಾಶನ
ಕಲುಷಹರ ಕಾಲಸಂಹಾರಿ ||೨||

ಪನ್ನಗಭೂಷಣ ಚನ್ನಶ್ರೀ ಪ್ರಭುವರ
ಮನ್ಮನ ಸರಸಿಜವಿಹಾರಿ ||೩||

---

೧-೧ ತನಯಾ (ಮೂ)

೧೪

ರಾಗ: ಸಾವೇರಿ, ತಾಳ: ಬಿಲಂದಿ

ಕಂಡೆ ನಿನ್ನ ಕರುಣೆಯೆಂಬುದ್ದಂಡತನದ ಮಹಿಮೆಯನ್ನು
ಖಂಡಚಂದ್ರಜೂಟ ಪ್ರಚಂಡ ಅಲ್ಲಮ ಪ್ರಭೋ ||ಪಲ್ಲ||

ಸಾಧು ಜನರ ಕೂಡ ವ್ಯರ್ಥ ಕಾದಿ ಅವರ ಸ್ವಾದ ಮರೆತು
ಭೇದಭಾವದಿಂದ ಬಹಳ ಬಾಧೆ ಸೋಸುತಿರ್ಪರ
ವಾದಕೆಡಿಸಿ ಅವರ ಮನದ ಮೋಹ ಪರಿಹರಿಸಿ ಯಮನ
ಬಾಧೆ ಕುಂಡದಲ್ಲಿ ಮೆಟ್ಟಿ ಹಲವು ಕಷ್ಟಪಡಿಸುತಿರ್ಪೆ ||೧||

ಆರು ತಮ್ಮ ಕಾರ್ಯಕಾಗಿ ಈ ರಸಾತಳ[ದಿ] ಉದಿಸಿ
ಗೌರೀಪತಿಯ ತಮ್ಮ ತ್ರಿಕರಣದಲ್ಲಿ ಭಜಿಪರ
ಸೇರದಹಂಕಾರದಿಂದ ಗಾರುಮಾಡಿ ಜರೆಯುತಿಹರ
ಜಾರಕರ್ಮದಿಂದ ಯಮನಾಗಾರಕೊಯ್ದು ದಣಿಸುತಿರ್ಪೆ ||೨||

ನಿನ್ನ ದಾಸರನ್ನು ಜರೆದು ಬನ್ನಪಟ್ಟ ದಿವಜರುಗಳಿ
ಗಿನ್ನು ಮರಣ ಜನ್ಮ ಅವರ ಬೆನ್ನ ಬಿಟ್ಟುದಿಲ್ಲವು
ಮುನ್ನಲಿದನು ಮರೆದು ವರದ ಚನ್ನಶ್ರೀ ಪ್ರಭುವಿನ ಭಜಕ
ರನ್ನು ದೂಷಿಸುವರ ಗರ್ವವನ್ನು ಮುರಿಸಿ ಕಾಡುತಿರ್ಪೆ ||೩||

೧೫

ರಾಗ: ಸಾರಂಗ, ತಾಳ: ಬಿಲಂದಿ

ಕಂಡೆನೆ ಶಿಡ್ಲ್ಯಾಳ ಪ್ರಭುವಿನ ಪ್ರಚಂಡಹರನ ||ಪಲ್ಲ||

ದಂಡಧರವಿನಾಶ ವರಮೃಕಂಡುತನಯವರದ ಪಂಚ
೧[ರುಂ]೧ಡ ಭಕ್ತಕಲ್ಪತರು, ಇನ ಖಂಡೇಂದುಧರನ ||೧||

ಭಾಲನೇತ್ರ, ಕಾಲಹರ, ವಿಶಾಲಗಾತ್ರ ಗಿರಿಜಾಪ್ರೀತ
ಶೂಲಧೃತ, ಕಪಾಲಹಸ್ತನ ಮುನಿಜಾಲನತನ ||೨||

---

೧-೧ ತುಂ (ಮೂ)

ಮನ್ಮಥಮದನಾಶ, ಸಕಲ ಸನ್ಮತ ಸುರನರನತಪದ
ಚನ್ನಶ್ರೀ ಪ್ರಭು ಮಾಯಾಮರ್ದನನಾ ಸಂಪನ್ನ ಶಿವನ ||೩||

೧೬

ರಾಗ: ಸಾರಂಗ

ನೋಡಿರಿ ಮರುಳಸಿದ್ಧೇಶ್ವರನ ನೋಡಿರಿ ಭಕ್ತಿಯೊಡಗೂಡಿರಿ
ಭಯಗಳೀಡ್ಯಾಡಿರಿ ಭಜಿಸುತ ಶಂಕರನ ||ಪಲ್ಲ||

ಕಲಿಯುಗದಲಿ ತನ್ನನೊಲಿದು ಭಜಿಸುವರ
ಸುಲಭದಿ ಪೊರೆವ ಮಹೇಶ್ವರನ ||೧||

ಅಂಬುಜತನಯಶಿರಾಂಬುಜ ಕರಧರ
ಶಂಬರಾರಿಯ ಮದಸಂಹರನ ||೨||

ಸುರುಚಿರ ಖಾನಾಪುರಮಂದಿರವಾಸ
ವರಕರ ಚನ್ನಶ್ರೀ ಪ್ರಭುವರನ ||೩||

೧೭

ರಾಗ: ಶ್ರೀರಾಗ

ವಂದೇ ಮಾರಸಂಹಾರಂ
ಸ್ಕಂದಪಿತ, ಅತಿಘೋರಂ ||ಪಲ್ಲ||
ವೃಂದಾರಕ ಮಂದಾರಂ
ಸುಂದರಿ ಗಿರಿಜಾ ವಿಹಾರಂ ||೧||

ಪಂಚವದನ ಮದನಾಶಂ
ಕಾಂಚನ ಶೈಲನಿವಾಸಂ ||೨||

ಪನ್ನಗಭೂಷಣಂ ಅಗೇಶಂ
ಚನ್ನಶ್ರೀ ಪ್ರಭುಮ್ ಅಖಿಲೇಶಂ ||೩||

೧೮

ರಾಗ: ಕಾನಡಾ

ಪುರಭೇದನ ಕಪಾಲಿ ಗಿರಿಜಾಮನೋಹಾರಿ ||ಪಲ್ಲ||

ತರುಣಶಶಿಕಲಾಧಾರಿ
ವಾರಣಾಸುರವೈರಿ
ಮರಣ ಜನನಭಯ ಸಂಹಾರಿ ||೧||

ಪನ್ನಗಾಧಿಪಧಾರಿ
ಮನ್ಮಥನ ಸುವಿಹಾರಿ
ಚನ್ನಶ್ರೀ ಪ್ರಭು ವಿಶ್ವಾಧಾರಿ ||೨||

೧೯

ರಾಗ: ಭೈರವಿ

[1][ಪಾಹಿಮಾಂ][1] ಸಾಂಬ ಪುರಾರೇ
ಶ್ರೀ ಮಹಾದೇವ ಕಾಮಾರೇ ||ಪಲ್ಲ||

ಹೈಮವತೀಮುಖಕಮಲ ಮಧುಕರ
ಸಾಮಜಾಸುರಸಂಹಾರೇ ||೧||

ವೃಂದಾರಕಾಧಿಪನಮಿತ ಪದಾಂಬುಜ
ಸುಂದರಗಜಾ ವಿಹಾರೇ ||೨||

ಷಣ್ಮುಖತಾತ ಸುವರ್ಣಗಿರೀಶ ಭೋ
ಚನ್ನಶ್ರೀ ಪ್ರಭು ಮಾಯಾರೇ ||೩||

೨೦

ಕಂಡೆ ವಿಘ್ನೇಶ್ವರನ
ಕೆಂಡಗಣ್ಣನ ಸುತನ ||ಪಲ್ಲ||

ದುಂಡುಮಲ್ಲಿಗೆ ಹಾರನ
ಖಂಡತೇಜೋಮಯನ ಬ್ರ
ಹ್ಮಾಂಡದೊಳತಿಶಯದಲ್ಲಿರುವಾತನ ||೧||

---

೧-೧ ಮಾಮವ (ಮೂ)

ಕುಂಡಲಿಬಿಗಿದಿಹನ
ಸೊಂಡಿಲುರ್ವೊಗದವನ
ಚಂಡಿಕಾದೇವಿ ಚಾಮುಂಡಿ ನಮಿತನ ||೨||

ಕನ್ನೆವಿರಹಿತನ
ಚಿನ್ನದೊಡ್ಯಾಣನ
ಚನ್ನಶ್ರೀ ಪ್ರಭುವಿನೊಳುನ್ನತದಲ್ಲಿಪ್ಪನ ||೩||

೨೧

ರಾಗ: ಭೈರವಿ

ನಿಟ್ಟಿಸಿಕಂಡೆ ದೃಷ್ಟಮೂರುತಿ ಸೃಷ್ಟಿಗೀಶನ ||ಪಲ್ಲ||

ದಟ್ಟಿ ಪೀತಾಂಬರ ಕಾಶಿಯ ಕಟ್ಟಿ ನಲಿದನ
ಉಟ್ಟಿ ಬಟ್ಟೆಯ ಸೆರಗ ಚಿಗಿಸಿಕೊಟ್ಟಮಹಿಮನ
ಸಟೆಯ ನುಡಿವ ಪಾತಕನ ಮೆಟ್ಟಿ ನಡೆದನ ರಾಜ
ಪಟ್ಟದಾನೆಯ ಚರಕೆ ಇತ್ತ ದಿಟ್ಟ ಬಸವನ ||೧||

ಬಟ್ಟಿ ಕುಚದಲ್ಲಿ ನೋಡಿದ ಇಷ್ಟಲಿಂಗನ
ಬೆಟ್ಟವನು ಮೊನೆಯ ಬೊಟ್ಟಿಲೆತ್ತಿ ನೆಗೆದನ
ಕಷ್ಟ ಕರ್ಮೇಂದ್ರಿಯಂಗಳ ನಿಟ್ಟೊರಿಸಿದನ
ಅಷ್ಟದಿಕ್ಕಿನಲಿ ಭರಿತ ಶ್ರೇಷ್ಠ ಬಸವನ ||೧||

ಕುಟ್ಟಿ ಅಸುರ ಪಡೆಯನೆಲ್ಲ ಸುಟ್ಟುಬಿಟ್ಟನ
ನೆಟ್ಟನೆನ್ನ ಹೃದಯದಲ್ಲಿ ಗಟ್ಟಿಗೊಂಡನ
ದಿಟದಿ ಚೆನ್ನಪ್ರಭುವಿನೊಡನೆ ಕೂಟವಾದನ
ಕೊಟ್ಟೂರದಿಂದ ಬಂದ ಸ್ಫುಟ ವಿಭೂತಿಬಸವನ ||೩||

೨೨

ರಾಗ: ವರಾಳಿ, ತಾಳ: ಬಿಲಂದಿ

ಕಾಣಲೆನಗಾನಂದವಾಯಿತು, ಈ ಜಾಣ ಚರವ,
ಏಣಲೋಚನಾಂಕ ಪಂಚಬಾಣದಹನ ಸಕಲ ಶೃತಿ ಪು
ರಾಣಶಾಸ್ತ್ರತತಿಗೆ ತಾನೆ ಪ್ರಾಣವಾದ ಮಹಿಮನನೀಗ ||ಪಲ್ಲ||

ಚಂಡಕರಹವೀಂದುನೇತ್ರ
ಖಂಡಿತಾಂತಕಸುಗಾತ್ರ
ಮಂಡಿತ ಸುರನರಮುನಿ, ಮೃ-
ಕಂಡುಜಾತವರದನ [ನೀ]ಗ ||೧||

ನಾದಬಿಂದು ಕಲೆಗತೀತ
ಸಾಧು ಸರ್ವಜನ ಸಂಪ್ರೀತ
ಭೇದಭಾವರಹಿತ ಸಕಲ
ವಾದಗಳಿಗೆ ನಿಲುಕದಿಹನ ||೨||

ಧನ್ಯ ಪರಮ ಷಟ್‌ಸ್ಥಲ ಸಂ
ಪನ್ನ ತ್ರಿಗುಣಿಹರ ವರಗುರು
ಚೆನ್ನ ಶ್ರೀ ಪ್ರಭು ತಾನೆ ಪರಮ
ಹೊನ್ನತಿಯೊಳು ಮೆರೆದನಿಗೆ ||೩||

೨೩.

ರಾಗ: ತೋಡಿ

ಗುರು ಶಿವಲಿಂಗೇಶ
ಪರಮಪಾವನ ವರಮಹೇಶ ||ಪಲ್ಲ||

ಜಗದುದ್ಧಾರ ಫಣಿಕುಂಡಲಧರ
ಅಗಣಿತ ಮಹಿಮಾಗಾರ ||೧||

ಭಸಿತಭೂಷಿತ ಕೋಮಲಗಾತ್ರ
ವೃಷಭವಾಹನ ಸುಪವಿತ್ರ ||೨||

ಚಿನ್ಮಯರೂಪ [೧][ಸನ್ನುತ][೧]ನಿರ್ಗತತಾಪ
ಚನ್ನಶ್ರೀ ಪ್ರಭು ಚಿತ್ಕಲಾಪ ||೩||

---

೧-೧ x (ಮೂ)

೨೪

ರಾಗ: ವರಾಳಿ

ಸಂಗಮೇಶ ಅಂಗಜವಿನಾಶ ||ಪಲ್ಲ||

ಮಂಗಳ ಹೃತ್ಕರಣಂಗತರಕ್ಷಕ
ಗಂಗಾಧರ ಸುಭುಜಂಗಾಭರಣ ||೧||

ಕುಂಡಲೀಶ, ವರಕುಂಡಲಪರಿಭವ
ಖಂಡನ ಪರಮ ಮೃಕಂಡುಜವರದ ||೨||

ಸನ್ಮತಿ ಶಿವಮಾರ್ಗೋನ್ನತ ಕಾರಣ
ಚೆನ್ನಶ್ರೀ ಪ್ರಭುವರ ಚಿನ್ಮಯ ರೂಪ ||೩||

೨೫

ರಾಗ: ಧನಾಶ್ರೀ

ದೇಹಿ ಮಮದೇಹಿ ಶಂಭೋ ತವಭಜನಂ ||ಪಲ್ಲ||

ಅಂಬುಜಜಾತಶಿರ ಅಂಬುಜಕರ ಕರು-
ಣಾಂಬುಧಿ ವರಸುದಿಗಂಬರ ಪರತರ
ಜಂಬಭೇದಿನುತ ಶಂಬರಾರಿ ಹರ
ಲಂಬೋದರಪಿತಾಂಬರಕೇಶ ||೧||

ಗಂಗಾಧೃತ ಸಾರಂಗಪಾಣಿ ವರ-
ಮಂಗಳಮೂರ್ತಿ ಭುಜಂಗಭೂಷವರ
ಅಂಗಜಗರ್ವವಿಭಂಗ ಸಾರಗಿರಿ
ಜಾಂಗಸಂಗ ಶಿವಲಿಂಗ ಕೃಪಾಂಗ ||೨||

ಮನ್ಮನಸರಸಿರುಹನಿವಾಸ ವರ-
ಸನ್ಮುನಿ ಪೂಜ್ಯ ಜಗನ್ನುತ ಸಾಕ್ಷಿ
ಚಿನ್ಮಯರೂಪ ಸುವರ್ಣಶೈಲಧನ್ವ
ಚೆನ್ನಶ್ರೀ ಪ್ರಭುವರ ಷಣ್ಮುಖವಂದ್ಯ ||೩||

೨೬

ರಾಗ: ಭೈರವಿ

ಕಂಡೆ ಶಂಕರನ ಖಂಡೇಂದು ಕಲಾಧರನ
ದಂಡಿತಮದನ ಪ್ರಚಂಡ ಪೂರ್ವಾಸುರ
ಖಂಡಿತ ಪರಮ ಮೃಕಂಡು ಸೇವಿತನ ||ಪಲ್ಲ||

ಗಂಗಾಧರನ ಮಂಗಳಕರನ
ಗಾಂಗೇಯಪಿತ ಗಿರಿಜಾಂಗಲೋಲ ಸು ಭು
ಜಂಗಭೂಷಣ ಭಸ್ಮಾಂಗ ಶೋಭಿತನ ||೧||

ಪರಮಪಾವನನ ಸುರವರಾನತನ
ಪುರಹರ ಸುರುಚಿರಶಿರಕರ ಭಸ್ಮಾ
ಸುರಹರ ಪರತರ ಕರುಣಾಕರನ ||೨||

ಚಿನ್ಮಯರೂಪನ ಸನ್ಮುನಿಯುತನ
ಕಿನ್ನರ ಪತಿ ಸಂಪನ್ನಮಿತ್ರ, ಗುರು
ಚೆನ್ನಶ್ರೀ ಪ್ರಭುವರ ಪನ್ನಗಧರನ ||೩||

೨೭

ರಾಗ: ಹಮೀರ ಕಲ್ಯಾಣ

ಎಂತುವರ್ಣಿಸಿ ಪೇಳುವೆ ನಾನು ಮದ-
ನಾಂತಕ ಪ್ರಭು ಅಪ್ರತಿಮನಾ
ಶಾಂತಸದ್ಭಕ್ತರ ಚಿಂತಿತಾರ್ಥವನಿತ್ತು
ಸಂತಸದಲಿ ಅವರ ಅಂತರಂಗದಲ್ಲಿಹನಾ ||ಪಲ್ಲ||

ಒಲಿದು ಭಕ್ತರ ಬಾಲನಾದನು
ಕುಲಛಲ ನೆಲೆಗಳ ಬಿಟ್ಟಾತನು
ಹಲವು ಕಾಲದಲಿ ಅರಸಿದ ಅಜಹರಿಗಳು
ನೆಲೆಯ ಕಾಣದೆ ನಾಚಿದರ ಕಂಡು ನಗುವನ ||೧||

ಮೂರು ಪುರವ ಸುಟ್ಟಾತನ ಮಹಾ-
ಧೀರ ಕಾಲನಿಟ್ಟೊರಸಿದನ

ಆರು ಗುಣಂಗಳಿಗತಿ ದೂರನಾಗಿ
ಪರಾಶರ ಮೊದಲಾದ ಮುನಿಕುಲವಂದ್ಯನ ||೨||

ಸನ್ನುತಶರಣ ಸಂತೋಷನ
ಎನ್ನ ಹೃದಯನಳಿನದಿನೇಶನ
ಹೊನ್ನತ್ರಿದಳವಾಸ ಪನ್ನಗಧರ ಮೋ-
ಹನ್ನ ಸುಗುಣರನ್ನ ಚೆನ್ನಶ್ರೀ ಪ್ರಭುವಿನ ||೩||

೨೮

ಮಗಿಪ್ರಭುವೆ ಅಖಿಳ ಬ್ರಹ್ಮಾಂಡ ಪಿಂಡಿರಿಯ
ಗಗನ ಮಾರ್ಗವನೆಂದು ಘನಮನಭೇರಿಂದು
ನಿಗುಮುದದ್ರಿ ಮಹಾಂಕಾಲ ಮಮಸುತಾರ
ಬಗೆಭರಿತ ಬಲುಭೀಮ ಭೀಮ ಪ್ರಚಂಡಮ
ಸೊಗಸಿ ಸೊಗಸಿ ಸತ್ಯ ಸತ್ಯ ವಂತ ಮೊಗ್ಗೆ ||ಪಲ್ಲ||

ಅತಿಶಯ ಸಿರಿವರವು ಅನುಪಮಶ್ರುತಿಕರವು
ಉನ್ನತಕ ಉನ್ನತ ಇರವು ನಿತ್ಯ ವರವ
ಹಿತಕೆ ಹಿತದಾನಂದ ಲೇಸಾದಳಂತದೊ
ಸೊಗಸಿಟ್ಟ ಪ್ರಭುವೆ ಚೆನ್ನಪ್ರಭುವೆ ||೧||

೨೯

ಶ್ರೀ ಗುರು ಮಾಡಿದ ಅಗಣಿತ ಕರುಣೆ ತಿಳಿಯದು
ಲೋಗರ ಮಾತೇನೊ
ಸಾಗಿಸುವನು ತನಗಾಗಿ ನಂಬಿದರೆ
ಭೋಗಸಮೃದ್ಧಿಯನುಭೂ
ಭಾಗದೊಳಗೆ ಗರ್ವಿಸಿ ನಡೆದರೆ ಬಹು
ರೋಗದಿ[ತಾ]ದಣಿಸುವನು ||ಪಲ್ಲ||

ಹಿಂದೆ ಕೃಷ್ಣಗೊಂಡನನು ಪಾಥನು ತಾ
ಬಂದಿಖಾನೆಯೊಳಿಡಲು ದಯದಿಂದ
ಅಶ್ವವನೇರಿಸಿ ಪಾಥನೊಲಿಸಿದಂಥ ಮಹಿಮನಿವನು ॥೧॥

ಆ ಧರಾತಲ ಗೋಕಾವಿ ಸಿದ್ಧರಾಮನು
ಚದುರ ಪಾಸಪ್ಪನ ಕದನದಿ
ಮುತ್ತಿ ಕೊಂಡೊಯ್ಯುವರ ಬಲ
ದಿಂದ ಗೆಲಿಸಿದಂಥವನಿವನು ॥೨॥

ಅನ್ಯರು ಕೂಡಿ ಚೆನ್ನಿಗಲ್ಲಪ್ಪ
[೧][ನನ್ನ][೧]ಮಿರಜಿಯೊಳಿಡಲು
ತನ್ನ ಸಿಕ್ಕೆ ಶಿರಪೇಚ ಕೊಡಿಸಿದಂಥಾ
ಚನ್ನಶ್ರೀ ಪ್ರಭುವರನು ॥೩॥

## ಗುರುಸ್ತುತಿ ರೂಪದ ಸ್ವರವಚನಗಳು

೧

ರಾಗ: ಭೈರವಿ

ನೀನೆ ಗುರು ನೀನೆ ಗುರು
ಸ್ವಾನುಭಾವದ ನೆಲೆ ಅನುಗೊಳಿಸಿದವ ॥ಪಲ್ಲ॥

ಮಾನ್ಯನಾನೆಂದು ಅಹಂಕಾರದಿ ಬೆರಿಸಿ, ನೀ।
ಮುನ್ನ ವ್ಯಸನಕ್ಕೀಡಾಗದಿರೆಂದವ ॥೧॥

ನಾನು ನೀನೆಂಬ ದ್ವಯಭೇದಂಗಳನು
ಜ್ಞಾನದಿ ಕಡಿದು ಮೌನದಿ ನೋಡೆಂದವ ॥೨॥

ಶೂನ್ಯಬ್ರಹ್ಮದ ಕೀಲವನರಿದು ನೀ
ಚನ್ನಶ್ರೀಪ್ರಭುವಿನೊಡನಾಡೆಂದವ ॥೩॥

---

೧-೧ x (ಮೂ)

೨

ರಾಗ: ಸಾರಂಗ

ಕುರು ಮನಸಾ ಗುರುಸ್ಮರಣಂ ದುರಿತವಿಹರಣಂ ಭವತರಣಂ
ಪರಿಗತ ಜನ್ಮಜರಾಭಯಮರಣಂ ||ಪಲ್ಲ||

ಕೃತ ಬಹುಜನ್ಮಾಂತರದೊಳಂ
ತತ್ಪದ ದರ್ಶನ ಮಾತ್ರ ವಿನಾಶಂ ಶುಭವೇಶಂ ||೧||

ವರಮುನಿನಾರದ ಸ್ತೋತ್ರಂ
ಸ್ಫುರುತ ಸುರಾಸುರ ಸೇವಿತ ಗಾತ್ರಂ, ಸುಪವಿತ್ರಂ ||೨||

ನತಜಾಲಸುಪಕ್ಷಂ ಜಯದ ಚನ್ನಶ್ರೀ
ಪ್ರಭು ಮಮ ರಕ್ಷಂ ||೩||

೩

ರಾಗ: ಮಲ್ಹಾರ

ಶ್ರೀ ಗುರು ಒಲಿದಾ ಎನಗೆ
ಶರೀರ ಕರ್ಮೇಂದ್ರಿಯ ಅರಿಯೆಂದು ಪೇಳಿದ ||ಪಲ್ಲ||

ದುರಿತಶರಧಿಯೊಳಗಿಳಿದನೆಂದು।
ತ್ವರಿತದಿಂ ಬಂದೆನ್ನ ಕೈಪಿಡಿದ ||೧||

ಮಾರಬಾಧೆಗಳೊಳು ಭರದಿ ನೊಂದನು ಎಂದ
ಪರತರಮೂರ್ತಿ ಕರುಣ ಮೂಡಿದ ||೨||

ಅಧಮನೆಂದೆನ್ನನುದ್ಧರಿಸ ಬಂದು
ವದನದಿ ಚನ್ನಪ್ರಭು ಬಂದೆನ್ನ ಕೂಡಿದ ||೩||

೪

ಗುರುಪದ ಕಮಲಂ ಭಜರೆ
ಶ್ರೀ ಗುರು ಪದಕಮಲಂ ||ಪಲ್ಲ||

ಶರಣಾಗತ ರಕ್ಷಕ ಸರ್ವಾ[ನ]ನ್ಯಂ
ಮರಣ ಜನನಭಯ ಹರರೆ ||೧||

ವರಣಾತೀತ ಸಕಲಮುನಿ ವರದಂ
ಕರುಣಾಕರ ಶಶಿಧರರೆ ||೨||

ಮನ್ಮನ ಸರಸೀಜ ಭ್ರಮರಕಾರ್ಯ
ಚೆನ್ನ ಶ್ರೀಪ್ರಭುವೇ ತೇ ಹರರೆ ||೩||

೫೫

ಪಾಲಿಸೆನ್ನ ಶ್ರೀ ಗುರುವರ ||ಪಲ್ಲ||

ದುರಿತಬಾಧೆಗಳ ಸಂಹರಿಸುತಲೆನ್ನ
ಕರುಣಿಸು ಬೇಗ ಶಂಕರ ||೧||

ಚಿನುಮಯ ನಿನ್ನನುದಿನ ಸ್ಮರಿಸುವೆನಾ
ಘನಮಹಿಮನೆ ಶಶಿಧರ ||೨||

ನಿನ್ನ ನಂಬಲು ಭಯ ಇನ್ನುಂಟೆ ಜಗದಿ
ಚೆನ್ನ ಶ್ರೀಪ್ರಭು ಪರತರ ||೩||

೬

ಗುರು ಒಲಿದಾ ಎನಗೆ, ಶರೀರ ಕರ್ಮೇಂದ್ರಿಯ
ಜರಿ ಎಂದು ಪೇಳಿದ ||ಪಲ್ಲ||

ದುರಿತಶರಧಿಯೊಳಗರಿಯದಿಳಿದನೆಂದು
ತ್ವರಿತದಿ ಬಂದೆನ್ನ ಕೈಯ ಪಿಡಿದ ||೧||

ಮರಣಬಾಧೆಗಳೊಳು ಭರದಿನೊಂದನು ಎಂದು
ಪರತರಮೂರ್ತಿ ಕರುಣವ ಮಾಡಿದ ||೨||

ಅಧಮನೆಂದೆನ್ನನು ಹೆದರಿಸದೆ ಬಂದು ತವ-
ಕದಿ ಚೆನ್ನಶ್ರೀಪ್ರಭು[ವೆನ್ನ]ಕೂಡಿದ ||೩||

---

೧-೧ x (ಮೂ)

೭

ನೀನೆ ಗುರು ನೀನೆ ಗುರು
ಸ್ವಾನುಭಾವದ ನೆಲೆ ಅನುಗೊಳಿಸಿದವ ||ಪಲ್ಲ||

ನಾನು ನೀನೆಂಬ ದ್ವಯಭೇದಗಳ
ಜ್ಞಾನದಿ ಕಡಿದು ಮನದಿ ನೋಡೆಂದವ ||೧||

ಮಾನ್ಯ ನಾನೆಂದಹಂಕಾರದಿ ತಿರುಗಿ, ನೀ
ಮುನ್ನ ಜನನಕ್ಕೀಡಾಗದಿರೆಂದವ ||೨||

ಶೂನ್ಯ ಅಶೂನ್ಯದ ಕೀಲವನರಿದು, ನೀ
ಚೆನ್ನಶ್ರೀಪ್ರಭುವಿನೊಡನಾಡೆಂದವ ||೩||

೮

ಗುರು ನರನೆಂದು ಕಾಂಬುವರೇನೊ
ತಾರಕ ಪರಮಪವಿತ್ರ ||ಪಲ್ಲ||

ಪಾವನಚರಿತ ಸಂಜೀವನ ಲೋಕಸ್ವ-
ಭಾವಸಂಹರ ಪರಮಾತ್ಮ ||೧||

ನಿಗಮಗೋಚರ ಸುಗುಣಾನಂದ
ಮೃಗಧರನೇತ್ರ ಸಾಕ್ಷಾತ್ಕಾರ ||೨||

ಭಿನ್ನಭಾವರಹಿತ, ಸಂಪನ್ನ, ವಿಖ್ಯಾತ
ಚೆನ್ನಶ್ರೀಪ್ರಭು ಮಮ ದಾತ ||೩||

೯

ಶ್ರೀ ಗುರುವರ್ಯ ಎನಗೆ ತನ್ನಿರವ ತೋರಿದ
ಎನಗೆ ತನ್ನಿರವ ತೋರಿ ಚಿನುಮಯ ಪ್ರಸಾದವ ಬೀರಿ
ಎನಗೆ ತನ್ನಿರವ ತೋರಿದ ||ಪಲ್ಲ||

ಮೂಲಚಿದ್ಬಿಂದುರೂಪವ ನಾಸಿಕಾಗ್ರದಲ್ಲಿ
ಕೀಲಿ ಇಷ್ಟಬ್ರಹ್ಮದಲೂರಿದ

ಕಳೆ ನಾದ ಬಿಂದು ಒಳಹೊರಗೇಕ ಮಾಡಿದ
ಒಳಗಿನ ಬೆಳಗಿನ ಸುಳುಹಿನ ಶೂನ್ಯವ
ಇಳಿಸಿದ ದಿನಕರಕೋಟಿ ಪ್ರಕಾಶ ||೧||

ಮನಬುದ್ಧಿ ಚಿತ್ತಹಂಕಾರವ ಅನುನಯದಿ ತ್ಯಜಿಸಿ
ಮನ ಉನ್ಮನ ಘನವನು ತೋರಿಸಿ
ಸನುಮತದಿಷ್ಟ ಪ್ರಾಣಭಾವಗಳ ಸ್ಥಾಪಿಸಿ
ಮನನಾದ ಸತ್ಪ್ರಣವದನಾದವ
ತನ್ಮಯನಗೊಳಿಸಿದ ಘನಗಂಭೀರ ||೨||

ಮೂರಾರು ಮೂವತ್ತಾರರ ಮೀರಿ ತೋರುವ
ಸಾರದ ಇನ್ನೂರ ಹದಿನಾರು
ವರಮಿಶ್ರದೊಳೇಕ ಮಾಡಿ ಆನಂದದೊಳಾಡಿ

ತೂರ್ಯಾತೀತಮಯ ಕರ ತಳೆದಿರವನು
ವಿರಚಿತ ಶಾಂಭವ ಚೆನ್ನಪ್ರಭುವೆ ||೩||

## ಸತಿ-ಪತಿ ಭಾವದ ಸ್ವರವಚನಗಳು

೧

ರಾಗ: ಭೈರವಿ, ತಾಳ: ಆದಿ

ತರುಣಿ ಪ್ರಿಯನ ಕ್ಷರತಾರೆ ಸುಂದರಿ ||ಪಲ್ಲ||

ಹರಣದೊಲ್ಲಭನಿಲ್ಲದಿರುಳೊಂದು ಯುಗವಾಯ್ತು
ಕರುಣಿಸಿ ಕಾಂತನೊಡನೆ ನಿಸ್ಸಾರ ||೧||

ಶಂಬರಾರಿಯ ನೆರೆ ಅಂಬುಗಳಿಗೆ ನಾ ಈಡಾದೆ
ಕುಂಭಕುಚವ ನಾ ತಂಬಿಸಲಾರೆ ||೨||

ಕನ್ನೆ ಪ್ರಾಯದಲಿ ನಾ ನಿನ್ನನು ನಂಬಿದೆನು
ಚೆನ್ನಶ್ರೀ ಪ್ರಭು ಎನ್ನೊಳಿನಿತು ಮುನಿವರೆ ||೩||

೨

ರಾಗ: ಸೋರಟ

ಮುನಿದು ಎನ್ನ ಮನೆಗೆ ನಲ್ಲ ಬಾರನು ||ಪಲ್ಲ||

ಕೇರಿಯೊಳು ನಾರಿಯರೊಳು ಸೇರಿ ಮಾತನಾಡುತ್ತಿರಲು
ವಾರಿ ಮುಸುಕನಿಟ್ಟು ಮುಖವ ನೋಡನು ||೧||

ದೂತೆ ಹೋಗಿ ಕರೆಯಲಾಗಿ ನೀತಿಯನು ಪೇಳಿದನು
ದೂತೆಯ ನುಡಿ ಕೇಳದಿಹ ಬಧಿರನು ||೨||

ಮುನ್ನ ಬಹಳ ಎನ್ನೊಳು ಸ್ನೇಹವನು ಮಾಡಿ ಅಗಲಿ ಪೋದನು
ಚನ್ನಶ್ರೀ ಪ್ರಭು ತರ್ಕವ ತರನು ||೩||

೩

ರಾಗ: ಸೋರಟ

ಕರೆ ಅವನ ಬೇಗ ನೀ ಹೋಗಿ ಎನ್ನಾಣೆ ನೀ ಹೋಗಿ ||ಪಲ್ಲ||

ಪುರುಷನಿಲ್ಲದ ಮಂದಿರ ಮನ[೧][ಕೆ][೧]ಸೇರದು
ಸ್ಮರನ ಪಂಚಬಾಣ ಉಕ್ಕಿಸಿ ||೧||

ಇಂದು ತನ್ನ ಪಾದಹೊಂದಿದೆ ನಾನನುದಿನ
ಬಂಧುಬಳಗಕೆ ನಾ ಹೊರತಾಗಿ ||೨||

ಪಂಥವ ಬಿಡಿಸು ನೀ ಸಂತಸದಿಂದಲಿ
ಕಾಂತನ ಅಡಿ[೨][ಗೆ][೨]ಶಿರದಳನು ಬಾಗಿ ||೩||
ಬಿಡದನವರತ ಎನ್ನೊಡನೆ ನಿಲ್ಲನು
ತಡೆದನು ಕಲ್ಲುಮರನಾಗಿ ||೪||

ಎನ್ನಗುಣವ ನೋಡದಿನ್ನು, ನೋಡಲು ತಾ-
ಚನ್ನಶ್ರೀ ಪ್ರಭು ಹಂಸಶಿವನ ||೫||

---

೧-೧ ಕಿನ್ನ| ಸುಗತಿ (ಮೂ)

೪

ರಾಗ: ಆಸಾವೇರಿ

ಸುಗುಣ ನೀನವಳನಗಲಲೊಂದು ದಿನ
ಯುಗವಿದಾಯಿತ್ಯೆ ನಗೆ ಅಲ್ಲವು ಕೇಳು ||ಪಲ್ಲ||

ಹಗಲಿರುಳು ನಿನ್ನ ಬಗೆಯ ಚಿಂತಿಪಳೆಲ್ಯೆ
ಮಾಡಿದಾ ಸೊಗಸ ಮರೆಯಳೆಲ್ಯೆ ||೧||

ಪ್ರೀತಿಯಿಂದ ಮನಸೋತ ಕಾಮಿನಿಯ ನೇತಕೆ ಉಪೇಕ್ಷಿಸಿದೆ
ಅವಳ ನೀ ನೋಡು ಪರೀಕ್ಷಿಸು ಹಿತಾಹಿತ ಮಾತು ನಿರೀಕ್ಷಿಸದೆ ||೨||

ಅಂಬುಜಾಕ್ಷಿ ಮದನಂಬುತಾಗಿ ಬಲು
ಹಂಬಲಿಸುವಳೆಲ್ಯೆ ||೩||

ಬಾರದ ಸಂಭ್ರಮವನು ಪೇಳ್ಯೆ
ನಂಬಿರುವಳು ಬಹಳ್ಯೆ ||೪||

ಕನ್ಯಾಪ್ರಾಯದಲಿ ನಿನ್ನ ಸೇರಿ . . . . . ಬುದರಿದೆ
ಈ ಸ್ನೇಹದಿ ಭಿನ್ನವೇಕೆ ಬರಿದೆ ಪಾಲಿಪುದ್ಯೆ
ಚೆನ್ನಶ್ರೀ ಪ್ರಭು ಬಿಡದೆ ||೫||

೫

ರಾಗ: ಸಾರಂಗ, ಆದಿತಾಳ

ತಾಳಲಾರೆ ನಳಿನಮುಖಿಯೆ
ಕಾಂತನ ತೋರೆ ತಾಳಲಾರೆ ||ಪಲ್ಲ||

ಅನುದಿನ ತನ್ನ ಬರವ ಹಾರೈಸುತ
ಮನಗುಂದಿದೆ ತಡೆವರೆ? ||೧||

ಅಗಲಿ ಈತನ ಅರಗಳಿಗೆ ಇರಲಾರೆ
ಸುಗುಣೆ ಬೇಗನೆ ಕರೆತಾರೆ ||೨||

ಚೆನ್ನಶ್ರೀ ಪ್ರಭುವರ ಎನ್ನಪರಾಧವ
ಇನ್ನೂ ಕ್ಷಮಿಸುವಲ್ಲೆ ಉಸುರೆ ||೩||

೬

ರಾಗ: ಮಲ್ಹಾರ

ಸುಂದರಿ ಪ್ರಿಯನ ಕಾಣದೆ ಕ್ಷಣನಿಂದಿರದೆನ್ನ ಮನ
ಮಂದಗಮನೆ, ನಾನಂದದ್ದೇನು? ಅವನಿಂದನ್ಯಾಕೆ? ನೀ-
ನಿಂದು ಹೋಗಿ ಕರೆತಂದು ತೋರಿಸಲು
ಚಂದವಾದ ಕಾಲಂದುಗೆ ನೀವೆ ನಿನಗೆ ಭಲಾ ನೀ ||ಪಲ್ಲ||

ಕುಸುಮಶರನ ಹೋಲ್ವನ, ಕುಶಲನ, ರಸಿಕ ಜನರನಲ್ಲನ
ಹಸಿತವದನದವನ ಹೊಸಜವ್ವನ ದೇಶಕಧಿ ಶೋಭಿತನ ||೧||

ಬಿಸಜಗಂಧಿ ನೀ ಹೋಗಿ ಎನ್ನೊಶವ ಮಾಡಿಸಲು
ಮಿಸುನಿ°[ಯ ನೀವೆ]°ಸುಂದರಿ, ಪ್ರಿಯ ಎದುರು
ನುಡಿವಲ್ಲೆ ತುಳಿತ ಆಡವ ||೨||

ಕಾಣದೆ ನಿಲ್ಲಳು ಸುಜಾಣೆ
ಜಾಣೆ ಸರ್ಪವೇಣಿ ||೩||

ಕಾಂತೆ ನಿನ್ನಯಗುಣ ಚಿಂತಿಸುತಲಿಹಳೊ
ಇಂಥ ಪ್ರೀತಿಯನೆಲ್ಲಿ ಕಾಣೆ ||೪||

ಅಂಬುಜಮುಖಿ ಬಹು ಹಂಬಲಿಸುತ ನಿನ್ನ
ನಂಬಿರುವಳು ಸುಪ್ರಾಣೆ ||೫||

ಚನ್ನ ಶ್ರೀ ಪ್ರಭುವರ ನಿನ್ನಯ ಚರಣಕೆ
ಭಿನ್ನವಿಲ್ಲವು ಅಹಿವೇಣಿ ||೬||

೭

ರಾಗ: ತೋಡಿ

ಬಣ್ಣದ ವಸನವನು ನಾನೊಸೆದು ಕೊಡಿಸುವೆನು
ಶಶಿವದನೆ ನಿನಗೆ ಭಲಾ ನೀ ||ಪಲ್ಲ||

ಕಡು ಸೊಬಗಿನ ನವಪ್ರೌಢನ ದೃಢಮನಸಿನವನ
ಸಡಗರದಲೊಪ್ಪುವನ ಬೆಡಗಿನಿಂದ ಅಡಿಯಿಟ್ಟು ನಡೆಯುವವನ
ತಡಮಾಡದವನೆಡೆಗೆ ಹೋಗಿ ಎನ್ನೊಡೆಯ ಪಾಲಿಸೆಂದು
ಅಡಿಗೆ ಬಿದ್ದು ಕೈ ಪಿಡಿದು ತಂದು ಎನ್ನೊಡನೆ ಕೂಡಿಸಲು
ಕಡಗವಿತ್ತು ನಮಿಸುವೆ ಭಲಾ ನೀ ||೧||

ಚೆನ್ನಿಗರಾಯನ ಚಿನ್ಮಯನ ಚಿನ್ನದೊಡ್ಯಾಣದವನ
ಮನ್ನಣೆಯಿಂದಿಹನ ಮಾನ್ಯರಶಿರೋರತ್ನ[೧][ವೆನಿಸುವನ][೧]
ತನ್ನಿ ಕೇಳು ವರಚೆನ್ನಶ್ರೀ ಪ್ರಭುವಿಗೆ ಎನ್ನ
ಬಿನ್ನಪಗಳನು ಪೇಳಿ ಸಂಪನ್ನನಿಂದು ತೋರಿಸಲು
ಉನ್ನತದ ರನ್ನದುಂಗುರವ ನೀವೆನು ಭಲಾ ನೀ ||೨||

೮

ರಾಗ: ಹಮೀರ ಕಲ್ಯಾಣ

ನಿಂತನ್ಯಾಕೆ ಶಾಂತ ಬಾರದಲಿ ಸಂತಸದಲಿ ಏಕಾಂತದಿ ಹೋಗಿ ಅವ
ನಂತರಂಗವ ತಿಳಿವಂತೆ ನೀ ಮಾಡೇ ||ಪಲ್ಲ||

ಒಲಿದು ನೋಡುತ ನಲಿದು ಮುದ್ದಿಡುತ
ಸಲುಗೆಯಿಂದಲಿ ಕಾಮಕಲೆಗಳನಪ್ಪುತ
ಬಲುಬಗೆಯಿಂದೆನ್ನ ಒಲಿಸುವ ಸುಗುಣನ ||೧||

ಪ್ರೇಮದಿಂದಲಿ ಕಾಮಕೇಳಿಯಲಿ ಆ ಮನೋಹರನೆನ್ನ ನಿ
ಯಮದಾಣವ ಮುಟ್ಟಿ
ತಾ ಮನಬಂದಂತೆ ನೆರೆವ ಸುಜಾಣ ||೨||

ತನ್ನ ನಂಬಿದೆ ಅನ್ಯರರಿಯದೆ
ಎನ್ನಯ ತನುಮನವ ಮುನ್ನ ಒಪ್ಪಿಸಲಾಗಿ
ಚೆನ್ನಪ್ರಭು ಬಾರನ್ಯಾಕೆ ಪ್ರವೀಣ ||೩||

---

೧-೧ x (ಮೂ)

೯

ರಾಗ: ಕಲ್ಯಾಣ

ನಿನ್ನಪಾದ ನಂಬಿದ್ದೆನಾ ಮನ್ನಿಸೊ ನೀ ಎನ್ನ ||ಪಲ್ಲ||

ಕನ್ನೆಪ್ರಾಯದೊಳು ಎನ್ನ ಮನ್ನಿಸಿ ಮಾತನಾಡಿ
ಚನ್ನ, ಚಿತ್ತ ಕಣ್ಣದೋರಿ ಎನ್ನ ಅಗಲುವುದುಚಿತವೆ ||೧||

ಚಿಕ್ಕಂದು ಮೊದಲು ನಿನ್ನ ತೆಕ್ಕೆಯೊಳು ಅಪ್ಪಿಕೊಂಡು
ಅಕ್ಕರದಿಂದೆನ್ನ ಕೂಡಿ ಲೆಕ್ಕಿಸದಿರುವುದೊಳಿತೆ ||೨||

ಧರೆಯೊಳಧಿಕವಾದ ಪುರತ್ರಿದಳದಲ್ಲಿ ವಾಸ
ಂಕರೆದು ನಂಬಿ ಚನ್ನಗೊಲಿದ ಗುರು ಅಲ್ಲಮ ಪ್ರಭುರಾಯನೆ ||೩||

೧೦

ನಾಥಾ ನಿನ್ನಗಲಿರಲಾರೆ ಮಾತಾಡದೆ ಮುನಿವರೆ ||ಪಲ್ಲ||

ಧಾತು [ಗುಂದಿದೆ][೧] ನಿನ್ನ ಪ್ರೀತಿಯ ನೆನಿಸಿ
ಕಾತರ ಸೈರಿಸಲಾರೆ ||೧||

ಗಂಧಮಲ್ಲಿಗೆಸಾರ ಛಂದದ್ರವ್ಯಗಳ
ನಂದವಬಿಟ್ಟಗಲುವರೆ? ||೨||

ಚೆನ್ನಶ್ರೀ ಪ್ರಭುವೆ ನಾನಿನ್ನ ನಂಬಿದೆನು
ಎನ್ನವಗುಣವ ನೋಡುವರೆ ? ||೩||

೧೧

ಕಾಣೆ ನಿನ್ನಂಥ ಜಾಣೆಯ ಕನ್ಯಾ ಶಿರೋಮಣಿಯ
ಕಾಣೆ ನಿನ್ನಂಥ ಜಾಣೆಯ ಪ್ರಾಣಸಖಿ ನನ್ನ ಪ್ರವೀಣೆಯ
ಅಣತಿಯಲಿ ನೆರೆದುದನುಸುರಲು
ಮೌನದವನ ಸನ್ಮನಸುದೋರಿದೆ ||ಪಲ್ಲ||

---

೧-೧ ಗೊಂಡಿದೆ (ಮೂ)

ಸಮರತಿ ಮೊದಲಾದ ತ್ರಿವಿಧಗಳ ಭೇದಾಭೇದಗಳ
ಕ್ರಮವರಿದಾವಾವತಾಣಗಳ ಮುಟ್ಟುವ ಕಾಂತೆಯಳ
ವಿಮಲಾಂಗವನಪ್ಪಿ ಸಂತೋಷದಿ ರಮಣಿಯಳ ಗುಣಸ್ತುತಿಗೈಯುತ
ರಮಿಸಿದೆನೆಂದಾನರುಪಲು ನೀ ಮಮತೆಯ ಬಿಡದಾತನ ಕೊಂಡಾಡಿದೆ
||೧||

ಗಂಧಕಸ್ತೂರಿಗಳ ಲೇಪಿಸುತ ಅವಳೊಡನೆ ನಾನಾ
ಚಂದಾದ ಕುಸುಮವ ಸೂಡುತ ನಗಿನುಡಿ ಆಡುತ
ಬಂಧವನರಿದಾಲಂಗಿಸಿದಾನಂದದಿ ಕೇಳೆಂದರುಹಲು
ಸಂದೇಹದ ನುಡಿಗಳ ನಾಡದಿರೆಂದವನೊಳು ಸ್ನೇಹವ ಬೀರಿದೆ ||೨||

ಧನ್ಯಳೆಂದೆನು ಕೇಳ್ ಮಾನಿನಿಯೆ ಏಣಲೋಚನೆಯೆ
ನಿನ್ನಯ ಸದ್ಗುಣಗಣಕಾರಿಣಿಯೆ ಮರಿಶುಕವಾಣಿಯೆ
ತನ್ನಯ ಕಾಂತನು ಅನ್ಯಳ ನೆರೆಯಲು
ಸನ್ಮಾನಿಪ ಸ್ತ್ರೀಯವಳು ಲೋಕದಿ ಮಾನ್ಯಳಹುದು ಸರ್ವಸಖಿಜನದೊಳು
ಚನ್ನಶ್ರೀ ಪ್ರಭು ನಿನಗೊಲಿ[ವು]ದು ಚೋದ್ಯವೆ ? ||೩||

೧೨

ರಾಗ: ತೆಲುಗು ಕಾಂಬೋದಿ

ಬಂದಾನೊ, ಪ್ರಭುರಾಯ ಬಾಗಿಲಕೆ ನಿರ್ಮಾಯ
ಹೊಂದಿ ಹೊಸ್ತಲ ಹೊನ್ನು ಗಂಧವಾಲಗೆ ರನ್ನದಿಂದಿಕ್ಕುವಾಡ
ಕುಂದಣ ಕರವಾಡ ಅಂದವಾ ಪಾಡುತ ಆಕಾಶ ನೋಡುತ
ಸುಂದರ ಸೊಬಗುಳ್ಳ ಸ್ವಯರೂಪ ಕದ್ದಕಳ್ಳ
ಕುಂದಿಲ್ಲರೂಪು ರಾಜಕಳೆಯುಳ್ಳ ಸಾಯುಜ್ಯ
ನಿಂದು ನೀರ್‌ಗುಡಿಯಳತಿ ಎನ್ನಗೆಳತಿ ||ಪಲ್ಲ||

ಬತ್ತಲೆ ಬರೆಘಾಟ ಭ್ರೂಮಧ್ಯದೋರೆನೋಟ
ಚಿತ್ತಕ್ಕೆ ಉಪದೇಶ ಚಿಗುರಿಸುವ ಅಭಿಲಾಷ
ಕತ್ತರಿಸಿದ ಗಡ್ಡ ಕರದಲ್ಲಿ ಮಗಿ ದೊಡ್ಡ
ಮತ್ತೊಂದು ಕರಮುಳ್ಳ ಮುಚ್ಚಿಹೊಕ್ಕುಳ ಡೊಳ್ಳ

ನೆತ್ತಿಲಿಳಿವ ಕಾಹಳೆ ನಡುರೇಖೆ ಭುಜದಲ್ಲಿ
ಮತ್ತೆ ಮುಂಗೈಯಚೂರ್ಣ ಮೊಳಕಾಲೊಡೆದ ಹುಣ್ಣಿ
ಇತ್ತ ಬಂದಿದ್ದ ಎನ್ನಳುತೆ ನನ್ನ ಗೆಳತಿ ||೧||

ಗುದತೆರೆದಿಹ ಗಾತ್ರಗೂಡಿ ಜೋಲಂಘ್ರಿನೇತ್ರ
ಹುದುಗಿ ಕೊಂಕಳುಗುರು ಹುರುಕು ತುರಿಸುತಿರೆ
ಅಧರವಿಡಿದ ಜೊಲ್ಲು ಉದರ ಅಂಗುಷ್ಟದೊಳಲ್ಲಿ
ಒದಗಿಡಿದಿರೆ ನೊಣ ಓಂಕಾರ ಧ್ವನಿಗುಣ
ಅಧಿಕ ನೊಣ ಮುತ್ತಿ ಅರಿವಿಗೇನೋಮೆತ್ತಿ
ಕೆದರಿದ ತಲೆ ಊರ್ಧ್ವಕೇಶವಿಲ್ಲದೆ ತೋರ್ದ
ಸದನಿಧಿಯೊಳು ಸುಖಿ ಸುಳಿದಾನೆ ಎನ್ನ ಸಖಿ ||೨||

ಶಬ್ದರಸದ ಸುಳಿವ ಶಾಸ್ತ್ರಕ್ಕೆ ಹೇಳುವ
ಒಬ್ಬಾತನಲ್ಲದೆ ಇಬ್ಬರೊಳಿಲ್ಲದೆ
ಹುಬ್ಬೆತ್ತಿ ಹಣೆ ಸೋಂಕಿ ಹಸ್ತಕಮಲ ಬಿಂಕು
ಅಬ್ಬರ ಚರಶೇಷ ಅರಿದು ಛಪ್ಪನ್ನದೇಶ
ಪರ್ಬಿತು ಪ್ರಭೆನೋಟ ಪಟ್ಟಣ ಪುರಖೇಟ
ಕಬ್ಬಕ್ಕಿ ಕೃತಿಮೇಳ ಕೂಡಿದಾಶ್ಚರ್ಯ ಬಹಳ
ನಿಬ್ಬಣ ನಿಧಿನಿಕಾರ ನಿಜಪ್ರಕಾರ ಗೆಳತಿ ||೩||

ಪಿಡಿದು ಹೆಚ್ಚಿನ ಹೆಂಗಳೊಡಗೊಂಡು ಆಲಿಂಗ
ಬಿಡದೆ ಅಮರ್ದಪ್ಪಿ ನೆತ್ತಿಯ ಬಲಿದು ಸೋಂಕ್ಷ
ಹಿಡಿದು ಚೆಲ್ಲರಾಸೆಯ ಜೀವಕಾಸೆಯ ತುಡುಕಿ ಅವಸರಗೂಡಿ
ಅಡಿಪಾಸರಾವ ಮಾಡಿ ಕಡಗ ಕಂಕಣ ಬಳೆ ಕೊಪ್ಪುತೆ ಕಂಠಮಾಲೆ
ಒಡನಾದ ಧ್ವನಿಯಲ್ಲಿ ಒತ್ತಿಸಿಕೊಳುತಲಿ
ನಡೆದು ಬಂದಿದ್ದ ಎನ್ನೊಳತಿ ಎನ್ನ ಗೆಳತಿ ||೪||

ಸ್ತೋಮನೆರೆದು ಥಾಳ ಚಾಮರ ಚಕ್ರದೊಳು
ಹೇಮ ಪಲ್ಲಕ್ಕಿಗಳ ಹೊಸಮುತ್ತಿನ ಕಂಕಳ
ಆ ಮೂರ್ತಿ ಅಸ್ವರದಿಂದ ಅಣಿಮಾಣಿಕಜಾತ
ಗ್ರಾಮಕ್ಷೇತ್ರವು ಗೃಹಭಾವ ಭಾವಕಿ ಸೋಹ
ತಾಮರಸದ ರಾಗ ತೋರ್ಪನೆನಗನುರಾಗ

ಕ್ಷೇಮದಿ ಕುಲಕಂಜಿದ ಮಸಿ ಪುಸಿ ರಂಜಿಸಿ
ನೇಮ ನೇಮಿಸಿ ಭ್ರಮಿಸಿ ಮೋಹ ಕ್ಷಮಿಸಿ ಗೆಳತಿ ||೫||

ರಾಜರ ಧನಿಯರ ರಮಿಸುವಂದದಿ ಪುರಸಹಜವ ನಟಿಸುವ
ಸಟೆಯಲ್ಲಿ ಶಿವಶಿವ
ಪೂಜಿಸುವಂಥ ಜ್ಞಾನಪ್ರತಿಮಿರ ಸ್ತನ ಸ್ಥಾನ
ಭುಜವ ಮುಟ್ಟುತಲೆ ಭ್ರಮಣೆಯನಟ್ಟುತಲೆ
ಮಾಜ ಮಾನಿನಿಯರ್ಗೆಮನ್ನಾದ ಶಾಸ್ತ್ರದೇಳಿಗೆ
ವಾಚಿಸಲಿಸುವಂತೆ ವಲ್ಮೀಗಾರರಿಗೆ ಚಿಂತೆ
ಕಾಜುಲಿಂಗಾದ ಕೃತಿಯ ಸುಸಂಗಾದ ಗೆಳತಿ ||೬||

ಸನ್ಮಾನಹೃದಯ ಸೊಗಸು ಸುಧೆಯ ಉಣಬಡಿಸುತ,
ಉಚ್ಛಾಯನೋಡುತ
ದುನ್ಮನ ದುಗುಡದ ದುಷ್ಟರಂತ ಕೇತಾರ ತನುಮನ ಹರದಾರ
ತತ್ವಮಸಿಯ ಮೋಹರ
ಕಿನ್ನನುಕ್ಕೈತೋರಾ ಕಡಿಯೆ
ದುನ್ಮನ ಕೋಟಿರೂಪ ಮಂದಾರ ಮನಭೂಪ
ಚನ್ಮೋಘ ಪ್ರಭುಸನ್ನಿಭ ಚಿತ್ತದ ಶುಭ ||೭||

೧೩

ರಾಗ: ಸೋರಟ

ತಂದು ತೋರಿಸು ಇಂದು ಶೇಖರನ
ತಂದು ತೋರಿಸಾನಂದದಿಂದ ನಾ
ಹೊಂದಿಸಿ ಕರವ ಮುಗಿವೆ, ನಿಂದಿರದೆ ||ಪಲ್ಲ||

ಹೊತ್ತು ಹೋಗದು ಆತನ ಮನದ ಗತ್ತು ತಿಳಿಯದು ಕಾಡಿದನು ಎನ್ನ
ಹತ್ತೆ ಸೇರದೆ ಚಿತ್ತ ಕರಗದೆ
ಸತ್ಯಭಾಷೆಗಳನಿತ್ತು ಹೋಗಿ ತಾ
ನತ್ತಲೆ ನಿಲ್ಲುವುದೆತ್ತಣ ಮುನಿಸು ||೧||

ಚಂದಿರಾನನೆ ನಲ್ಲನೇತಕೆ ಇಂದು ಬಾರನೆ ನೀ ತಿಳಿ ಬೇಗದಲಿ
ಕುಂದರದನೆ ಚಂದವಿದೇನು
ಸುಂದರಾಂಗಿ ತಾ ಸಂದೇಹ ಮಾಡದೆ
ಅಂದವೇನು ತಿಳಿ ಸಿಂಧುರಗಮನೆ ||೨||

ತನ್ನನಂಬಿದೆ ಬಹಳ ಉಪಚಾರವನು ಮಾಡಿದೆ
ಕುಶಲ ವಿದ್ಯೆಗಳನ್ನು ತೋರಿದೆ
ನೂನವಿಲ್ಲದೆ ಸನ್ಮತದಿಂದಲಿ ಚೆನ್ನಶ್ರೀ ಪ್ರಭುವಿನ
ಮನ್ನಿಸಿ ಕರೆತಾರೆ ಚಿನ್ಮಯನನೀಗ ||೩||

೧೪

ರಾಗ: ಕಾನಡಾ

ನಾರಿ ಸರಸಗುಣಿ ||ಪಲ್ಲ||

ನಗೆಮುಖದಿಂದ ಸರ್ವಾವಯದೋರಿ
ಸುಗುಣನೊಲಿಸುವ ಸೊಗಸಿನ ಕನ್ಯೆ ||೧||

ತನುಮನವನೊಪ್ಪಿಸಿ ಘನ ಹರುಷದಲಿ
ಮನದಣಿವಂತೆ ರಮಿಸುವ ರಮಣಿ ||೨||

ಸನ್ಮತದಿಂದಲಿ ತನ್ನ ತಾ ಮರೆದು
ಚೆನ್ನಶ್ರೀ ಪ್ರಭುವಿನೊಳ್ ಬೆರೆದ ಕಾಮಿನಿ ||೩||

೧೫

ವರಬಿಂಬಾಧರೆ ಕರೆತಾರೆ ಕಾಂತನಿಂದು ತಡವೇಕೆ? ||ಪಲ್ಲ||

ಪ್ರೇಮದಿಂದವಗೆ ನಾಮರುಳಾದೆನು
ತಾ, ಮುನಿವರೆ? ||೧||

ತಾಪ ಬಹಳ ತನ್ನ ರೂಪವ ಕಾಣದೆ
ಈ ಪರಿ ಮಾಳ್ಪರೆ? ||೨||

ಕನ್ಯೆಕೇಳು, ನೀ ಚನ್ನಶ್ರೀ ಪ್ರಭುವರ
ಎನ್ನನಗಲುವರೆ? ||೩||

೧೬

ರಾಗ: ತೋಡಿ, ತಾಳ: ಆದಿ

ಸುಂದರಮುಖದೋರೆ ನೀರೆ ||ಪಲ್ಲ||

ಬಂಧುರಾಂಗಿ ಸುಖಸಿಂಧುರೂಪಿನಾ
ನಂದದೇನು ಸಾರೆ ||೧||

ಮನಸಿಜಯಂತ್ರದಿ ಘನದೇವತೆ ಎನ್ನ
ಮನವ ಸೈರಿಸಲಾರೆ ||೨||

ಚೆನ್ನಶ್ರೀ ಪ್ರಭುವಿನ ಉನ್ನತ ಚರಣಕೆ
ಬಿನ್ನವಿಸುವ ಬಾರೆ ||೩||

೧೭

ರಾಗ: ಧನಶ್ರೀ, ತಾಳ: ಆದಿ

ಜಾಣ ಎನ್ನಪ್ರಿಯ ಬಾರಬಾರ ||ಪಲ್ಲ||

ಆಗಮನಿಗಮಕತಿದೂರ ಸುಗುಣಯುತ
ನಗಜಾಧಿಪ ಮುಖದೋರ ಎನ್ನಪ್ರಿಯ ||೧||

ಸುರಮುನಿವಂದಿತ ಸ್ಮರಮದ ಮರ್ದನ
ಕರುಣಾಕರ ಶಶಿಧರ ಎನ್ನಪ್ರಿಯ ||೨||

ಚಿನ್ಮಯರೂಪ ಸಂಪನ್ನ ತ್ರಿಪುರಹರ
ಚೆನ್ನಶ್ರೀ ಪ್ರಭು ಮನೋಹರ ಎನ್ನಪ್ರಿಯ ||೩||

೧೮

ರಾಗ: ಗೌಳಸಾರಂಗ

ನೀರೆ ನಿನ್ನಯ ಮುಖದೋರೆ ನಿನ್ನ
ಮರೆದರೆ ನಾ ಘಳಿಗಿರಲಾರೆ ||ಪಲ್ಲ||

ತರುಣಿಕೇಳ್ ನಿನ್ನಯ ಸ್ಮರಣೆ ಮಾತ್ರದಿ ಎನ್ನ
ಹರಣರಕ್ಷಿಸಿದೆನು, ಸಾರೆ ||೧||

ಮೃಗವಿಹಂಗಗ[೧][ಳ್ನಿನ್ನ ಸುದತಿ][೧] ನೇತ್ರಕಂಜಿರೆ
ಅಗಲಿ ಜೀವಿಸಿರಲಾರೆ ||೨||

ಚನ್ನಶ್ರೀ ಪ್ರಭುಬಲ್ಲ ಎನ್ನ ಸಂತಾಪವ
ಕನ್ನೆ ಮೋಹನದ ನೀರೆ ||೩||

೧೯

ನೀರೆ ಸುಂದರೆ ಸುಗುಣನ ತೋರೆ ತಾಳಲಾರೆ ||ಪಲ್ಲ||

ಇನಿಯನ ಕಾಣದೆ ದಿನಯುಗವಾಯಿತು
ನೆನಸಿ ಬಳಲಿದೆ ಎನ್ನ ಮನೋಹರೆ ||೧||

ಅಂಬುಜಮುಖಿ ನಾ ತಂಬಿಸಲಾರೆನು
ಹಂಬಲ ಮುರಿಯನೆ? ಕಂಬುಕಂಧರೆ ||೨||

ತನ್ನ ಹೊರತು ನಾನನ್ಯರನರಿಯೆನು
ಚನ್ನಶ್ರೀ ಪ್ರಭು ಎನ್ನೊಳು ಮುನಿವರೆ ||೩||

೨೦

ಎನ್ನೊಳು ಮುನಿಸು ಇದೇನು
ನಿನ್ನನು ಬಹಳ ನಂಬಿದೆ ನಾನು ||ಪಲ್ಲ||

ತನುಮನವೆರಡನು ನಿನಗೊಪ್ಪಿಸಿದೆನು
ನೆನಪು ಮರೆಯೆ ನಿನ್ನ
ಘನಹರುಷದ ರತಿವಿಲಾಸವನು ||೧||

ಜಾತಿ ಕುಸುಮಗಂಧ ಪ್ರೀತಿದೋರದೆನಗೆ
ರೀತಿ, ಅಲ್ಲವಿದು
[೨][ನಾಥ][೨] ಮನ್ನಿಸೋ ಕೇಳೋ ನಿನ್ನವಳನು ||೨||

---

೧-೧ ಳಿನ್ನ! ಸುಗತಿ (ಮೂ)
೨-೨ ನಕ (ಮೂ)

ಕನ್ನೆಯರೊಳು ಸನುಮತಾದೆನೊ
ಚನ್ನಶ್ರೀ ಪ್ರಭು ಬೇಗ
ಮನ್ನಿಸೋ ಕೇಳೋ ಬಿನ್ನಹವನು ||೩||

೨೧

ತಂಬಿಸಲಾರೆ ತಂಬಿಸಲಾರೆ ಕರೆತಾರೆ ಮನೋಹರೆ
ಕಂಬುಕಂಧರೆ ||ಪಲ್ಲ||

ಕಾತರದಿಂದಲಿ ನಾನಾತನ ನೆನಿಸಿ
ಧೃತಿಗುಂದಿದೆನು ನೀರೆ
ಪ್ರೀತನ ತೋರೆ ||೧||

ಕುಸುಮ ಸುಗಂಧವು ಬೇಸರ ತೋರಿತು
ಬಿಸಜಾಕ್ಷಿ ತಡೆಯದೆ
ಕುಶಲನೊಳು ಸಾರೆ ||೨||

ನಿನ್ನ ಪ್ರಯತ್ನದಿ ಚನ್ನಶ್ರೀ ಪ್ರಭುವಿನ
ಬಿನ್ನೈಸಿ ತೋರಿಸೆನಗೆ
ಕನ್ನೆ ಸುಂದರೆ ||೩||

೨೨

ರಾಗ: ಜಯಜಯವಂತಿ

ಬಂದೆನೊ ನಾ ನಿನ್ನಡಿಗಾಗಿ
ಬಂಧುಜನರ ಹಂಬಲನೀಗಿ
ಸುಂದರ ಕಾಮನ ಶರತಾಗಿ
ನಿಂದಿರದೆ ಕಳವಳ ಬಹಳಾಗಿ ||ಪಲ್ಲ||

ಅಗರು ಚಂದನ ಘನಲೇಪ
ಸೊಗಸದು ಏನದು ಸಂತಾಪ
ಹಗಲಿರುಳು ಮರೆಯದು ನಿನ್ನ ನೆನಪು
ಸುಗುಣಾ ನೀ ಕೇಳೆನ್ನಾಲಾಪ ||೧||

ಇಂದು ಕಿರಣಂಗಳವು ಸೋಂಕಿ
ಬೆಂದು ಕಾಯವಿದಾಯಿತು ಬೆಂಕಿ
ಕುಂದಿದೆನ್ನ ಕರಣ ಕಲಂಕಿ
ಅಂದವಳಿದು ನಾ ಲಜ್ಜೆಯ ನೂಕಿ ||೨||

ಎನ್ನೊಳು ಗುಣವನರಸುವುದುಚಿತ ?
ಆನೆ ಸಖಿಯರೊಳು ಹಾಸ್ಯ ಇದೆಂಥ
ಚನ್ನಶ್ರೀ ಪ್ರಭು ನಿನ್ನೊರತ
ಭಿನ್ನವನರಿಯೆನು ನಾ ನಿರುತ ||೩||

೨೩

ಪಾಲಿಸೊ ಪೋಗಿ ನಿಜಸತಿಯ
ಮಂದಿರವನೊಲ್ಲದೆ ನೆನಸುವಳೊ ನಿನ್ನರತಿಯ ||ಪಲ್ಲ||

ಮಾಡಿದಪರಾಧನೋಡದೆ ಅವಳೊಡಗೂಡಿ
ಬಹಳ ಮೋಹಮಾಡಿ, ಜನದಿ ಬಲು
ಗಾಡಿ ಕಾರ್ತಿಯರ ನುಡಿಯ ಲಾಲಿಸದೆ
ತಡೆಯದೆ ಬಿಡು ಮನ ಕಲಿಯ? ||೧||

ಸುಂದರ ಸ್ತ್ರೀಯಳ ನಂದವ ಬಡಿಸಿ,
ಬಂದು ಮಂದಿರದಿ ಗಂಧಲೇಪನವ
ನಿಂದು ಮಾಡುವುದು ಚಂದದೋರದಿದು?
ಇಂದಗಲದಿರತಿ ಪ್ರೀತಿಯ ||೨||

ನಿನ್ನ ನಂಬಿದವಳನಿನ್ನ ಕಾಡುವುದು
ಸನ್ಮತವಲ್ಲ ಸಂಪನ್ನ ಚನ್ನಶ್ರೀ ಪ್ರಭು ಅವಳ
ಮನ್ನಿಸು ಬೇಗದಿ ಇನ್ನಗಲದಿರೆ ಒಳ್ಳಿತ್ಯೆ ||೩||

೨೪

ಯಾತಕೆ ನೀರೆ ಎನ್ನೊಳು "[ಮುನಿಶ್ಯಾ]" ತಕನೀರೆ ||ಪಲ್ಲ||

---

೧-೧ ನಿಶಿ (ಮೂ)

ಜಾಣೆ ಘಳಿಗೆ ನಿನ್ನ ಕಾಣದೆ ಎನ್ನಯ
ಪ್ರಾಣ ಕಳವಳಿಸುತಿದೆ ಸುದತಿ ||೧||

ತಾವರೆಗಣ್ಣಳೆ ಆವಗಮೆನ್ನ
ಜೀವನಿಲ್ಲದು ಬೇಗನೆ ಮುಖದೋರೆ ||೨||

ಚನ್ನಶ್ರೀ ಪ್ರಭುವಿನ ಸಮ್ಮುಖದಲ್ಲಿಯೆ
ನಿನ್ನ ಮುನಿಸು ಮಾಯ [೧][ಒಳ][೧] ಸಾರೆ ||೩||

೨೫

ನಲ್ಲ ಬಾರನು ಸಖಿಯೆ ಎನ್ನೊಳು ಮುನಿದು ಪ್ರಿಯಬಾರನು||ಪಲ್ಲ||

ಮಲ್ಲಿಗೆಗೋಲನ ಬಾಣದಿಂದಲಿ ನಾ
ತಲ್ಲಣಿಸುವೆ. ಎನ್ನ ಸೇರನು ||೧||

ಸರಿಗೆಳತಿಯರುಗಳ ಪರಿಹಾಸದಿಂದಲಿ
ಕರಗಿದೆ ಮುಖದೋರನು ||೨||

ನಿನ್ನನಗಲಿ ನಾನಿನ್ನು ಜೀವಿಸುವೆನೆ?
ಚನ್ನಶ್ರೀ ಪ್ರಭು ಮನೋಹರನೆ ||೩||

೨೬

ಇನಿಯನು ಬಾರದೆ ಕಾಡುವರೆ
ಇಷ್ಟೊಂದ್ಯಾಕೆ ನೀ ಕೇಳ ಶಂಕೆ ಎನ್ನೊಳಗೆ ||ಪಲ್ಲ||

ಪರಿಪರಿಯಲಿ ತನ್ನ ಸ್ಮರಿಸಿ ನಾ ಬಳಲಿದೆನು
ಪಾರಿಜಮುಖಿಯೆ ನೀ ಬೇಗನೆ ಕರೆತಾರೆ ||೧||

ಸರಸಿಜಬಾಣನ ಶರದಿಂದ ಬಹಳ ನೊಂದೆನು
ಕರುಣಿಸಿ ಪೋಗಿ ಎನ್ನ ಖೇದ ಅವನೊಳು ಸಾರೆ ||೨||

೧-೧ ನೊಳು (ಮು)

ಎನ್ನ ಸಂತಾಪಗಳನು ಚನ್ನಶ್ರೀ ಪ್ರಭುವಿನೊಳು
ಮನ್ನಿಸಿ ಪೇಳು ಸುಜಾಣೆ ನೀ ಸುಂದರೆ ||೩||

೨೭

ರಾಗ: ತೆಲಗ ಕಾಂಬೋದಿ

ಬಲ್ಲೆ ಬಲ್ಲೆ ನೀ ಒಲ್ಲೆನೆಂಬನುಡಿ
ಸಲ್ಲದು ಕೇಳು ಸುಜಾಣೆ
ಫುಲ್ಲಶರನ ಬಹು ಹೊಲ್ಲ ಬಾಣವೆನ್ನ
ನಿಲ್ಲಗೊಡದು ನೀ ಕಾಣೆ ||ಪಲ್ಲ||

ತರಳೆ ನಿನ್ನಯ ವರಪುರುಷನಂಜಿಕೆಯನು
ತೋರಲಂಜುವನಲ್ಲ ಕೇಳೆ
ನೀರೆ ಎನಗೆ ಭಾಷೆ ದೋರಿ ಎನ್ನನಗಲಿ
ಜಾರುವುದುಚಿತವಲ್ಲೆಲೆ
ವಾರಿಜ ಮುಖಿ ಇಂದಿನಿರುಳು ಪೋದಮೇಲೆ
ಮರಳಿ ದೊರಕುವುದೆ ನಾಳೆ
ಹರಳುಖಚಿತ ಆಭರಣ ನೀವೆ ಎನ್ನ ನೆರೆದು
ಸತ್ವರ ಸುಖಿ ಬಾಳೆ ||೧||

ಕಾಂತೆ ನಮ್ಮೀರ್ವರ ಅಂತರಂಗ ಒಂದಿರೆ
ಭ್ರಾಂತಿ ಬಳಗದ ಮಾತೇನೆ?
ಪಿಂತೆ ನೀ ಬಹು ಸುಕೃ [೧][ತವಂ][೧] ಮಾಡದಲೆ ಎ
ನ್ನಂತಹ ಸಖನು ದೊರಕುವನೆ?
ಚಿಂತೆಯ ಬಿಡು ನಿನ್ನ ಕಂತುಕೇಳಿಯೊಳು
ಸಂತೋಷಬಡಿಸುವೆ ನಾನೆ
ದಂತಿಗಮನೆ ಅಳಿಕುಂತಳೆ ಎನ್ನ ನಿ
[೨][ತಾಂ][೨] ತಕೆ ನಡೆ ಪಿಕಗಾನೆ ||೨||

---

೧-೧ ತಾಂತ(ಮೂ); ೨-೨ ಕಾಂ

ನಿನ್ನಯ ಮಾತೆಪಿತರುನ್ನತ ಬಳಗಗ
ಳನ್ನು ಬಾಯಿಥಡಿ ಹಾಕುವೆನೆ
ನನ್ನ ನಿನ್ನ ಮನಸಿನ್ನು ಒಂದಾಗಲು
ಮನ್ಮಥ ಸಫಲವಲ್ಲೇನೆ?
ಪನ್ನಗ ಹರಿ ಕರಿ ಉನ್ನತ ಹಂಸನು
ನಿನ್ನವಯವಕೆ ಪೋಲ್ವವೆನೆ
ತನ್ನ ದಯದಿ ಎಮ್ಮನಿನ್ನು ಕೂಡಿಸಿದ
ಚನ್ನಶ್ರೀ ಪ್ರಭುವರ ತಾನೆ ||೩||

೪೮

ರಾಗ: ಜಂಗ್ಲಾ

ಆ ಜಾಣೆಯ ಮನ್ನಿಸದಿರುವರೆ ||ಪಲ್ಲ||

ಎರಳೆಗಂಗಳೆಯ ತರಳೆಯ ಶೃಂಗಾರಿಯ
ಕರುಣಿಸು ಬೇಗ ಸುಂದರಿಯ ||೧||

ವರಶಂಬರಾರಿಯ ಕರದ ಕಠಾರಿಯ
ತಾಗಿದ ಮೋಹನಕಾರಿಯ ||೨||

ಪನ್ನಗವೇಣಿಯ ಕನ್ನೆ ಕುಮಾರಿಯ
ಚನ್ನಶ್ರೀ ಪ್ರಭು ಪಾಲಿಸಾಕೆಯ ||೩||

೪೯

ಸದನದೊಳಿರಲಾರೆ ||ಪಲ್ಲ||

ಗದಗದ ಎನುತಲಿ ಹೃದಯ ತಲ್ಲಣಿಸಿತು
ಒದಗಿ ನೀ ಕರೆತಾರೆ ||೧||

ಅಗಲಿ ಒಂದು ದಿನ ಯುಗವಾಯಿತೆನಗೆ
ಸುಗುಣಿ ಅವನ ತೋರೆ ||೨||

ಎನ್ನೊಳು ಕೋಪವೆ ಚನ್ನಶ್ರೀ ಪ್ರಭುವರ
ಎನ್ನ [೧](ನೀ)[೧] ನಗಲುವರೆ? ||೩||

೩೦

ನಾಥಾ ನಿನ್ನಗಲಿರಲಾರೆ ಮಾತಾಡದೆ ಮುನಿವರೆ ||ಪಲ್ಲ||

ಧಾತುಗುಂದಿದೆ ನಿನ್ನ ಪ್ರೀತಿಯ ನೆನೆದು
ಕಾತರ ಸೈರಿಸಲಾರೆ ||೧||

ಗಂಧಮಲ್ಲಿಗಸರ ಚಂದನದ್ರವ್ಯಗಳಾ
ನಂದವ ಬಿಟ್ಟಗಲುವರೆ? ||೨||

ಚನ್ನಶ್ರೀ ಪ್ರಭುವೆ ನಾ ನಿನ್ನ ನಂಬಿದೆನು
ಎನ್ನವಗುಣ ನೋಡುವರೆ? ||೩||

೩೧

ರಾಗ: ಬಿಲಾವರ

ಮಾಯಿ, ಮಾರಹರನೊಳು ಹಟಬೇಡ ನಡಿ
ಬರಿ ಹರಟಬೇಡ ನಡಿ ||ಪಲ್ಲ||

ಜಗಹಿತವಾಗಿ, ಅಗಜೆಯೊಳು ಸೆಣಸಿದ
ತ್ರಿಗುಣಾತೀತನ ದಯ ಪಡಿ ||೧||

ಸರಸಿಜಭವ ಸುರವರ ಮುಖ್ಯದಿವಿಜರು
ಅರಸಿ ಕಾಣರು ಈತನಡಿ ||೨||

ನಿನ್ನಯ ಗುಣ ತ್ಯಜಿಸಿ ಚನ್ನಶ್ರೀ ಪ್ರಭುವಿನ
ಉನ್ನತ ಮಾರ್ಗವ ಪಿಡಿ ||೩||

೩೨

ರಾಗ: ಭೈರವಿ

ಮಾಡೊ ನೀ ಎನ್ನೊಳು ದಯ ಪ್ರಿಯನೆ ||ಪಲ್ಲ||

---

೧-೧ x(ಮೂ)

ಹರುಷಗುಂದಿದೆ ನಿನ್ನ ಸ್ಮರಿಸಿ ಅನುದಿನ
ಇರಲಿ ನಿನ್ನ ಮನದಿ ಮಾಯೆ ||೧||

ಸ್ಮರನೈದು ಬಾಣದ ಪ್ರಹರದಿಂದ
ಪರವಶವಾಯಿತು ಎನ್ನ ಕಾಯ ||೨||

ಇರದೆ ನಂಬಿದೆ ನಿನ್ನ ಚರಣವನಿಂದು
ವರ ಚೆನ್ನಶ್ರೀ ಪ್ರಭುರಾಯ ||೩||

೩೩

ರಾಗ: ಶಂಕರಾಭರಣ

ಬಾರೆ ನೀರೆ ಮೋಹನಗಾರೆ ||ಪಲ್ಲ||

ತಳಿರಡಿಯಳೆ ಅಳಿಗುರುಳೆ ಪಿಕಗರಳೆ
ನಳಿನಾಕ್ಷಿಯಳೆ ಮುಖದೋರೆ ||೧||

ಅಂಬುಜಮುಖಿಯಳೆ ಕಂಬುಕಂಧರಿಯಳೆ
ಬಿಂಬದುಟಿಯಳೆ ಶೃಂಗಾರೆ ||೨||

ಚೆನ್ನಶ್ರೀ ಪ್ರಭುಪದವನ್ನು ಭಜಿಸದೆ ನೀ
ಉನ್ಮತ್ತಳಾಗಿರುವೆ ||೩||

೩೪

ರಾಗ: ನೀಲಾಂಬರಿ

ಏನು ಕೋಪವು ಪ್ರೀಯೊಳು ಏ ಇನಿಯನ
ನೀನೆ ಗತಿಯೆನುತ ಮಾನಿನಿ ನಂಬಿರೆ
ಹೀನತನವು ಬೇಡವೊ ಸ್ನೇಹಕೆ ಕೇಡವೋ ||ಪಲ್ಲ||

ಮಂದಗಮನೆ ಅವಳೊ ಗಂಧಕಸ್ತೂರಿ ಇಂದು ಧರಿಸಲೊಲ್ಲಳೊ
ಅಂದವಳಿದು ನಿಂದು ಹಂಬಲಿಸುವಳೊ
ಕಂದಿಹಳವಳೊ ಸುಂದರಾಂಗಿ ಮಾನಗುಂದಿ ಹಲವನೆನಿ
ಸಿಂದು ಕರಗುತಿಹಳೊ ಮರುಗುತಿಹಳೊ ||೧||

ಹೆಂಗಳರಸಿ ಅವಳೊ ಕಂಗಳೊಳು ಅಸು ಹಿಂಗದೆ ತುಂಬಿಹಳೊ
ರಂಗದುಟಿಯ ಭಂಗಗೊಳಿಸುತಿಹಳೊ ತುಂಗಕುಚೆಯಳೊ
ಅಂಗಜನೈದು ಬಾಣಂಗಳು ತಾಗಿ ಸು
ಸಂಗವ ನೆನೆವಳೊ, ಧ್ಯಾನಿಸುವಳೊ ||೨||

ಪನ್ನಂಗವೇಣಿಯಳೊ, ಅನ್ಯವನರಿಯಳೊ
ನಿನ್ನನ್ನು ಸ್ಮರಿಸುವಳೊ ತನ್ನತಾಮರೆದು
ಉನ್ಮತ್ತಳಾಗಿಹಳೊ ಭಿನ್ನವಳಿದಿಹಳೊ
ಕನ್ನೆಯೊಳಗೆ ರೋಷವಿನ್ನು ಸಲ್ಲದು ಕೇಳೊ
ಚನ್ನಶ್ರೀ ಪ್ರಭು ತಾರಿಸೊ, ಉದ್ಧರಿಸೊ ||೩||

೩೫

ರಾಗ: ಭೈರವಿ

ನಿನ್ನನಾಕೆ ನೆನಿಸುವಳೊ ಧ್ಯಾನಿಸುವಳೊ ಪ್ರಿಯ
ಕನ್ನೆಯೊಡನೆ ಕೋಪ ಬೇಡವೊ
ಚನ್ನಿಗ ಅವಳನಗಲಿರುವುದಿದು[೧][ನಿನಗೆ][೧]
ಸನ್ಮತವಲ್ಲ ಸಖಿಯರೊಳಗಿದು ||ಪಲ್ಲ||

ಅಂಬುಜಮುಖಿಯಳು ನಿನ್ನ ಸ್ನೇಹ[೨][ವನು][೨]
ಹಂಬಲಿಸಿ ಮರುಳಾದಳೊ
ತಂಬಿಸಲಾರದೆ ಮಂದಿರದೊಳಿಹ
ಕಂಬವಿಡಿದುಸುರಗೈವಳೊ
ಸಂಭ್ರಮವಳಿದು ಕರಗುವಳೊ
ಶಂಬರಾರಿಯ ಅಂಬುತಾಗೆ ಆ
ರಂಭೆ ತನ್ನೊಳು ತಾನೇ ಕರಗುವಳೊ ||೧||

ಹಂಸಗಮನೆ ನವಬಿಸಜನೇತ್ರೆಯಳು
ಹಂಸಮಂಚವ ಸೇರಲೊಲ್ಲಳೊ
ಆ ಸುದತಿಯ ಮನ ಬೇಸರಾಗಿ ಮಾ

---

೧-೧ x (ಮೂ); ೨-೨ x (ಮೂ)

ಹೇಶನ ಪಾದ ಸ್ಮರಿಸುವಳೊ
ಗಾಸಿಯಾಗಿ ಬಳಲುವಳೊ
ತಾಸು ಒಂದು ಯುಗವಾಗಿ ಹಳಹಳಿಸುವಳೊ
ಈಶ ಪಾಲಿಸು ನಿನ್ನ ನಂಬಿದವಳ ||೨||

ನಿನ್ನ ಸ್ನೇಹವ ನೆನಿಸಿನ್ನು ಸಖಿಯಳು
ತನುಮನದಿ ಕರಗುವಳೊ
ಚಿನ್ನದಾಭರಣಗಳನುಳಿದು ಸಖಿ
ಮನ್ಮಥನೊಶವಾಗಿಹಳೊ
ಭಿನ್ನವರಿದು ಮಾತಾಡಳೊ
ಎನ್ನ ನುಡಿಯ ದಯದಿಂದಾಲಿಸುತಲಿ
ಚೆನ್ನಶ್ರೀ ಪ್ರಭು ಪಾಲಿಸೊ ಸಖಿಯಳ ||೩||

೩೬

ರಾಗ: ಭೈರವಿ

ಸಖಿಯೆ ಕಾಂತಗೆ ತೋರೆ ನಾ ತಂಬಿಸಲಾರೆ ||ಪಲ್ಲ||

ನೀರೆ ನಲ್ಲನ ಬಗೆ ತಿಳಿದು ಬಾರೆ
ಮಾರನ ತಾಪ ಸೈರಿಸಲಾರೆ
ಸಾರೆ ನೀ ಹೋಗಿ ಶಿರವನು ಬಾಗಿ
ಧೀರನ ಕರೆದು ತಾ ಶೃಂಗಾರೆ ||೧||

ಇನಿಯನ ಕಾಣದೆ ನಾನಿರಲಾರೆ
ಮಾನಿನೀ ಕೇಳೆ ಬಿಂಬಾಧರೆ
ದಿನವು ಯುಗವಾಗಿ ನೆನಿಸಿ ಬೆಂಡಾಗಿ
ಮನಸು ಕುಂದಿದೆ ತಡ ಮಾಡುವರೆ ||೨||

ತನ್ನನಂಬಿದೆ ನಾನಿನ್ನು ಕಾಡುವರೆ
ಸನ್ಮತವಲ್ಲ ಮನೋಹರೆ
ಸನ್ಮುನಿವಿನುತ ಚೆನ್ನಶ್ರೀ ಪ್ರಭು ತಾ
ಎನ್ನೊಳು ಬರಿದೆ ಮುನಿಸುವರೆ ||೩||

೩೭

ರಾಗ: ಕಾನಡಾ, ತಾಳ: ಆದಿ

ಕೋಪ ಬೇಡೇಳೊ ಜೀವದೋಪ ನೀ ಕೇಳೊ
ಕೋಪಾಟೋಪಬೇಡ್ಯೆ ಪುರುಷ, ಸ್ಮರ
ತಾಪದಿ ಬಳಲುವ ಚಪಲಾಕ್ಷಿಯೊಳು ||ಪಲ್ಲ||

ಧೀರ ನೀ ಮನೆಗೆ ಬಾರದಿರಲು ಗೃಹ
ದ್ವಾರಕೈದಿ ಉಸುರುಗರೆವಳೊ
ಮಾರನ ವಿಕಾರವೆನಿಸುವ ಕ್ರೂರಶರಗಳು
ಪೂರ ತಾಗಲು ನಾರಿ ತಾಳಲಾರದೆ
ಹರಣ ಹಾರಿ ಬೀಳುವ ವಾರಿಜಾಕ್ಷಿಯೊಳು ||೧||

ಸುಂದರಾಂಗಿ ತಾನೊಂದುಕ್ಷಣವು ನಿಜ
ಮಂದಿರದಿ ನಿಲ್ಲಲಾರಳೊ
ಮಂದಗಮನೆಯು ಗಂಧ ಕುಸುಮವ
ಭಂದದಿಂದಲಿ ಹೂಸಿ ನಾನಾ ಬಂಧದಲಿ ತಾ
ಹೊಂದಿ ನಿನ್ನ ಆನಂದ ಬಡಿಸುವ ಇಂದು ಮುಖಿಯೊಳು ||೨||

ಮುನ್ನ ಬಹಳ ಸ್ನೇಹವನ್ನು ಮಾಡಿ ಮೇ
ಲಿನ್ನು ದುಗುಡವಿದುಚಿತವೆ
ಚನ್ನಶ್ರೀ ಪ್ರಭು ನಿನ್ನ ನಂಬಿಹ ಕನ್ನೆಯನು ನೀ
ಭಿನ್ನ ಮಾಡದೆ ಇನ್ನು ನೆರೆವುದು
ಬಿನ್ನವಿಪೆ ಮೋಹನಗುಣಸಂಪನ್ನ ಸಖಿಯೊಳು ||೩||

೩೮

ರಾಗ: ಮೋಹನ ಕಲ್ಯಾಣ, ತಾಳ: ಆದಿ

ರಮಣಿ ನೋಡೆನ್ನ ಪ್ರಿಯ ಸುಮ್ಮನೆ ಬಿಡುವನೇಕಯ್ಯ
ಕಾಮನಿಟ್ಟಳಿಗೆ ಮೈಮರೆದೆ ಕೇಳಮ್ಮಯ್ಯಾ
ಕಮಲ ಮುಖಿಯೆ ನಾ ಭ್ರಮಿಸಿದೆ ಬೇಗನೆ
ಗಮಿಸಿ ನಲ್ಲನಿಗೆ ನಮಿಸಿ ಕರೆದು ತಾ ||ಪಲ್ಲ||

ನೀರೆ, ಎನ್ನಯ ಕಾಂತ ಪುರುಷರೊಳು ಗುಣವಂತ
ಬಾರದೇತಕೆ ನಿಂತ ತರವೇನೆ ಈ ಪಂಥ
ಸರಸಿಜಾಕ್ಷಿ ನೀನಿರದೆ ಹೋಗಿ ಎನ್ನ
ಪುರುಷನ ತೋರಲು ಚರಣಕೆರಗುವೆನು ||೧||

ಮಾಡಿ ಸ್ನೇಹವನು ತಾನೇ ಕೂಡಿ ಕಾಡುವುದೇನೆ?
ಬೇಡಿಕೊಂಬೆನು, ನಾನು ಆಡಿದ ಮಾತೇನೆ?
ನೋಡಿ ಗಂಧವನು ತೀಡಿ ಚೆಂದುಟಿಯ ನೂಡಿ ಎನ್ನ
ಒಡಗೂಡಿ ಅಗಲುವರೆ? ||೨||

ಎನ್ನಪ್ರಾಣಸಖನಾದ ಚೆನ್ನಿಗನೆಲ್ಲಿ ಪೋದ
ತನ್ನ ನನ್ನೊಳು ಭೇದ ಕನ್ಯೆ ವ್ಯರ್ಥವಿವಾದ
ಪನ್ನಗವೇಣಿ ನೀ ಚನ್ನಶ್ರೀ ಪ್ರಭುವನು
ಮನ್ನಿಸಿ ಕರೆತರಲಿನ್ನು ಬದುಕಿದೆನು ||೩||

೩೯

ರಾಗ: ಬ್ಯಾಗಡ, ತಾಳ: ಆದಿ

ಕಾಂತಬಿಡು ನೀ ಪಂಥವಾಕೆಯೊಳು ಆ
ಕಾಂತೆ ನಿನ್ನನಗಲೆಂತು ಜೀವಿಪಳು
ಸಂತಸದಲ್ಲಿ ನಿಶಾಂತಕ್ಕೈದಿ ಅವಳಂತರಂಗದ
ಭ್ರಾಂತಿ ತೊಲಗಿಸುವಂತೆ ಮಾಡಿಸು
ಕಂತುರೂಪ ಅನಂತ ಸುಖವೀವಂಥ ಸತಿಯೊಳು ||ಪಲ್ಲ||

ಶಂಬರಾಹಿತನ ಅಂಬುಗಳಲಿಂದು ಇಂಬುಗೆಟ್ಟಿಹಳೊ
ಹಂಬಲಿಸಿ ಆ ರಂಭೆ ಸರ್ವಾರಂಭ ತೊರದಿಹಳೊ ದಿನ
ವೆಂಬುದನು ಯುಗವೆಂಬುತಲಿ ತಾ ಕಾಂಬಳವಳೊ
ತಂಬಿಸದೀಕ್ಷಣ ನಂಬದಾರನು ಉಂಬುವುದ ಮರೆದು
ಅಂಬುಜಾಕ್ಷಿಯು ನಂಬಿಹಳು ಭೇದೆಂಬುದರಿಯದೆ
ಬಿಂಬದುಟಿಯೊಳು ಸಂಭ್ರಮಿಸುವುದು ||೧||

ನಾರಿ ತನ್ನ ಮೋರೆ ತಗ್ಗಿಸಿ ನೀರನೆ ಎಂಬುವಳೊ ಮಂ
ದಿರದಲಿ ನಿಲ್ಲಲಾರದಿನಿಯನು ಬಾರನೆಂಬುವಳೊ, ಆ

ವಾರಿಜಾನನೆ ಕೇರಿಗೈದುತ ದಾರಿ ನೋಡುವಳೊ
ವಾರಿಗೆಯ ಕೆಳದಿಯರ ಸೇರುತ ಬೀರಿ ನಿನ್ನ ಉದಾರಗುಣಗಳ
ಹಾ ರಮಣ ಉಪಕಾರ ಮಾಡೆನುತ
ಹಾರೈಪ ಚಂದಿರಮುಖಿಯೊಳು ||೨||

ಚನ್ನಿಗನೆ ನೀನೆನ್ನ ಬಿನ್ನಪವನು ಲಾಲಿಪುದು
ಅನ್ನಳೆಂತವಳನ್ನು ನೋಡದಲಿನ್ನು ಪಾಲಿಪುದು, ಸಂ
ಪನ್ನ ಸ್ನೇಹಗಳನ್ನರಿದು ಗೃಹವನ್ನು ಸಾರುವುದು
ಸನ್ಮತದಿನೀ ಕನ್ನೆಯೊಡಗೂಡಿನ್ನು ಸುಖಿಸುವು -
ದುನ್ನತವಲ್ಲವೆ, ಚನ್ನಶ್ರೀ ಪ್ರಭು ಭಿನ್ನವೇಕೆ, ಮೋ
ಹನ್ನೆಯೊಳು ತಪ್ಪನ್ನು ನೋಳ್ಪರೆ ||೩||

೪೦

ಮನ್ನಿಸೊ ನೀ ಪ್ರಿಯ ಸುಗುಣೆಯ ||ಪಲ್ಲ||

ಕರೆವಳು ನಾರಿ ಯಾಕೆ ಬಾರೆ?
ತೊರೆದಳು ನಿನಗೆ ನಚ್ಚಿ ಧನ-ಮನೆಯ ||೧||

ಪಾಲಿಸೆಂದು ನೀನೇ ಬಂದು
ಒಲಿದಳು ನಿನಗೆ ಕೇಳು, ಕಾಮಿನಿ ||೨||

ನಿನ್ನ ಬಾಲೆ ನಂಬಿದ ಮೇಲೆ
ಭಿನ್ನವೆ ಚನ್ನಶ್ರೀ ಪ್ರಭುಮುನಿ ||೩||

೪೧

ರಾಗ: ಕಾನಡಾ

ಕಾಣದೆ ಆ ಪ್ರವೇಣಿ ನಿಲ್ಲಳು ಜಾಣತನವೇತಕೆ
ಮಾಣದಾಕೆಯ ಪ್ರಾಣ, ಕುಸುಮ
ಬಾಣನ ವಶಗಾಣಲು ಬಂದೆನು ||ಪಲ್ಲ||

ಚಂದನಗಂಧಿಯು ಮುಖಬಾಡಿ ಕುಂದಣದಾಭರಣವೀಡಾಡಿ
ಬಂದು ಬಾಗಿಲೊಳು ನಿನ್ನಯ ದಾರಿ ನೋಡಿ

ನಿಂದು ಸಖಿಯರೊಡಗೂಡಿ ಮಂದಹಾಸದಿಂದ ಮಾತಾಡಿ
ನೊಂದು ತನ್ನ ಮಂದಿರದೊಳು ನಿಂದಿರಲಾರಳು ಆ ಪ್ರೌಢಿ ||೧||

ಇಂದು ಮೂಡಣದೆಸೆಗೇರಲು, ಮಂದಮಾರುತನು
ಚಂಧದಿಂದಲಿ ಗಿಳಿಕೋಗಿಲೆಗಳ ವ್ರಜವು ಚೀರಲು
ಸುಂದರಾಂಗಿಗೆ ಮಲ್ಲಿಗೆ ಅರಳು ಕಂದರ್ಪನ ಶಸ್ತ್ರವಾಗಿರಲು
ಮಂದಗಮನೆ ನಲ್ಲನೆ ಹಾ ಎಂದು ನೆಲದಲಿ ಹೊರಳುವಳು ||೨||

ನಿನ್ನ ಶ್ರೀ ಚರಣಂಗಳಿಗೆರಗಿ ಬಿನ್ನವಿಸಿದಳು ಶಿರಬಾಗಿ
ತನ್ನಿ ಬಹುಬಗೆಯಿಂದಲಿ ಖಿನ್ನಳಾಗಿ
ಎನ್ನನಟ್ಟಲು ಬಂದೆನು ಸಾಗಿ, ಮನ್ನಿಸೆನ್ನ ಮಾತ ನೀ ಪೋಗಿ
ಚನ್ನಶ್ರೀ ಭು, ಆ ಕನ್ನೆಮಣಿಯನ್ನು ನೆರೆಯೊ ಸುಖಿಯಾಗಿ ||೩||

೪೨

ರಾಗ: ಸೋರಟ

ಜಾಣೆ, ಪ್ರಿಯ ಬಾರದೆ ಕಾಮನ
ಬಾಣದುರವಣೆ ತಾಳಲಾರೆ ನಾ
ಪ್ರಾಣಖೇದಗಳ ಪೇಳಲಿನ್ನೇನ
ಏಣಲೋಚನೆ ಕರೆ ಬಾಣವರದನ ||ಪಲ್ಲ||

ಇಂದುಕಿರಣಗಳಗ್ನಿರೂಪಾಗೆ
ಒಂದು ಕ್ಷಣ ನಿದ್ದೆ ಬಾರದೆನಗೆ
ಕುಂದರದನೆ ನೀ ಬೇಗನೆ ಪೋಗೆ
ನಿಂದಿರದೆ ಕರೆತಾರೆ ಮನೆಗೆ ||೧||

ಎಳೆಯ ಪ್ರಾಯವಿರ್ದಂದು ಮೊದಲೆ
ಘಳಿಗಿ ಅಗಲದಂಥ ಸ್ನೇಹವೆನ್ನ ಮೇಲೆ
ಉಳಿಯದಸುವು ನಲ್ಲನಗಲಿದಮೇಲೆ
ಸೆಳೆ ಮಂಚವು ಎನಗಾಯಿತು ಜ್ವಾಲೆ ||೨||

ತನ್ನ ನಂಬಿದವಳೊಳು ಪಂಥ ತರವೆ
ಇನ್ನು ಬಾರದಿರಲೆಂತು ಸೈರಿಸುವೆ

ನಿನ್ನ ಮನಸಿಗೆ ಬೇಕಾದುದನೀವೆ
ಚೆನ್ನಶ್ರೀ ಪ್ರಭುವಿನ ತೋರೆಲೆ ಭಾವೆ ||೩||

೪೩

ರಾಗ: ಸೋರಟ

ಚದುರೆ, ಶೃಂಗಾರೆ ವದನಾಂಬುಜದೋರೆ
ಸದಮಲ ಮದನ ೧[ನೊಳು]೧ ಸದನದೊಳೊಪ್ಪುವ
ಮದಗಜಗಾಮಿನಿ ಮೃದುಮದಗಂಧಿ ||ಪಲ್ಲ||

ನೀರೆ ನಿನ್ನಗಲರಘಳಿಗಿರಲಾರೆ ನೀ ಬರಿದೆ ಎನ್ನೊಳು ಮುನಿವರೆ
ಬೇಸರ ಮಾಡುವರೆ ಗಂಭೀರೆ
ಮಾರನ ಕಲೆಗಳ ಪರಿಪರಿಯಿಂದಲಿ
ತೋರಿ ನೆರೆದು ಸುಖದೋರೆ ವೈಯ್ಯಾರೆ ||೧||

ತರಳೆ ಕೇಸರಿಮಧ್ಯದ ಪಿಕಗರಳೆ, ಭಾ
ಸುರಭ್ರುಮವಳಿಗುರುಳೆ, ಮುದ್ರಾಂಕಿತ ಸುಂದರಬೆರಳೆ
ಹರುಷದಿಂದಲಿ ಎನ್ನ ಮಾತಿಗೆ ಬೇಗನೆ
ಬಾರದಿರಲು ನಿದ್ರೆ ಬಾರದು ಇರುಳೆ ||೨||

ಚೆನ್ನೆ ಸುದ್ಗುಣಗಣಸಂಪನ್ನೆ, ಗಿರಿ -
ಗುನ್ನತ ಕುಚದ ಮೋಹನ್ನೆ, ಸಮ -
ಗಾಣೆ ನಿನಗೆ ಗುಣಕನ್ನೆ, ಸನ್ಮತದಿಂದಲಿ
ನಿನ್ನಯ ತನುಮನ ಚೆನ್ನಶ್ರೀ ಪ್ರಭುವಿಗೆ ದಕ್ಕಿದವೆನ್ನ ||೩||

೪೪

ರಾಗ: ಅರಬಿ

ಚಂದ್ರವದನೆ ಚಪಲಾಕ್ಷಿ, ಚದುರೆ ಸಲ್ಲನಂದು ಕರೆದುತಾರೆ
ಸುಂದರ ಕಾಮನ ಬಾಣದಿಂದ ನೊಂದು ಬೆಂದು, ಕಾಯ
ಕಂದಿ ಕುಂದಿತೀಗ ಕರೆತಂದು ತೋರಿಸೆಂದು ನಮಿಸುವೆ ||ಪಲ್ಲ||

---

೧-೧ ದೊಲು(ಮೂ)

ಇಂದು ಮಲಯಾದ್ರಿಗಾಳಿ ಬೀಸಿ ಘಾಸಿ ಮಾಡಿತು ಎನ್ನ
ಬಂಧುರತನುವನು ಅಳಿಹಿಂಡು ಬಂಡುಗೆಯ್ಯಲು ಮನ
ಗುಂದಿ ಮಲಗಿರೆ ನೆನಿಸಿ ಕೊರಗಿ ಕರಗಿ ನಿದ್ರೆಯು ಬೀಳ
ದೆಂದೂ, ನಿನ್ನ ಬೇಡಿಕೊಂಬೆನಿಂದುಮುಖಿ ನೀ ಪೋಗಿ ಹಲ
ವಂದದಿಂದ ಬೋಧಿಸಿ ಆನಂದದಿಂ ಕರೆತಾರೆ ಮನೆಗೆ ||೧||

ಮೆಚ್ಚಿ ಮುನ್ನತಿಳಿಯದಲೆ ತನುವ ಮನವ ಸೋತೆನು ಅವ
ಗಿಚ್ಚೆ ಇಲ್ಲದವಳ ಮನೆಯ ಸೇರಿ ಬೀರಿ ಎನ್ನಯ ಗುಣ
ರಚ್ಚೆಮಾಡುತಲಿ ಅವಳ ಕರೆದು ಬೆರೆದು ನಾನಾ ವಿಧ
ದಚ್ಚ ಮಲ್ಲಿಗೆಯ ಸರ ಸ್ವಚ್ಛದಿಂದ ಪೂಸುತ ಕ
ಣ್ಮುಚ್ಚಿದವನ ತೋರಿಸಲು ಈ ಪಚ್ಚೆಸರವನೀವೆನೆಲೆ ಸಖಿ ||೨||

ಕನ್ನೆ ನೀನವನ ಬಳಿಗೆ ಪೋಗಿ ಬಾಗಿ ಆತನ ಮುನಿ
ಸನ್ನು ತಿಳಿಯುತ ಭರದಿ ಎನ್ನಬಿನ್ನಹವ ಪೇಳುತ ಬಹು
ಬಿನ್ನಣೆಯ ಮಾತುಗಳನಾಡಿ ಬೇಡಿಕೊಳ್ಳುತಲಿ ಆ
ಚನ್ನಶ್ರೀ ಪ್ರಭುವಿನ ಪಾದವನು ತೋರಿಸಲು ಕರದ
ಚಿನ್ನದ ಕಡಗವನೀವೆ ಮನ್ನಿಸೆನ್ನಮಾತ ಪೂರ್ಣ ||೩||

೪೫

ರಾಗ: ನೀಲಾಂಬರಿ

ಬರುವುದೇನು ಕಾರ್ಯ ಸಖಿಯಳೆ, ಮನ್ಮನದ ಮೋಹ
ಮುರಿದ ಮೇಲೆ ಚಂದ್ರಮುಖಿಯಳೆ
ಇರುಳು ಹಗಲು ಅವಳಗುಣವನೊರೆದು ಮಿ
ತ್ರರೊಡನೆ ಕಾಯ ಕರಗಿ ಕುಂದಿ[1][ಹೋಗಿ][1]ಎನ್ನ
ತಿರುಗಿ ನೋಡದಾದ ಮೇಲೆ ||ಪಲ್ಲ||

ತರಳೆ ಎಂದು ಉಪೇಕ್ಷೆಗೈದೆನೆ ಉಪಚಾರದಲ್ಲಿ
ದುರುಳತನವನೆಣಿಸಿ ನಿಂದೆನೆ, ಮರುಳುತನವೆ ಎನ್ನನೀಗ
ಹುರುಳುಗೆಡಿ[2][ಸನರ್ಘ್ಯವಾದ][2]
ಹರಳಜಡಿತಾಭರಣವೆಲ್ಲ ಮರಳಿ ಕಳುಹಲಾಗಿ ಎನಗೆ ||೧||

---

೧-೧ ಳಾಗಿ (ಮೂ); ೨-೨ ಸಿನಾರ್ಗವಾದ (ಮೂ)

ಕಂಡು ಮಾತನಾಡದಾದೆನೆ ಆ ವನಿತೆ ಬರಲು
ಪ್ಪಂಡತನದಿ ಕೋಪಿಸಿರ್ದೆನೆ?
ಲಂಡತನವಿದೇನು ಸಕಲ ಮಿಂಡುವೆಣ್ಣಳೊಳಗೆ ಎನ್ನ
ಬಂಡು ಮಾಡಿ ಕುಸುಮಕೋದಂಡಕ್ರೀಡೆಗೊದಗದಿರಲು ||೨||

ಪ್ರಥಮಸ್ನೇಹ ಮಾಡಲಾಗದು ಮಾಡಿರ್ದ ಬಳಿಕ
ಚತುರಪುರುಷನನಗಲಬಾರದು
ಮಥನವೇತಕೆನ್ನ ಮನದ ಕಥೆಯ ಬಿಟ್ಟು ಸತಿಯ, ಕಾಲ
ಹತ ಚೆನ್ನಶ್ರೀ ಪ್ರಭುವೆ ಬಲುಕೃತಕ ಮರೆದು ನಾಳೆ ಬರುವೆ ||೩||

೪೬

ರಾಗ: ತೆಲಗಕಾಂಬೋದಿ

ಸುದತಿ ಸೈರಿಸಲಾರೆನು ಚದುರ ಬಾರದಿರಲು ಸುದತಿ ಸೈರಿಸಲಾರೆ
ಮದನ ಶರಗಳಿಂದ ಹೃದಯ ತಲ್ಲಣಿಸಿತು ಒದಗಿ ಕರೆದುತಾರೆ||ಪಲ್ಲ||

ಹರುಷದಿಂದ ನಲಿದಾಡುತ ಮಂದಿರಕೆ ಬಂದು
ಸರಸದಿಂ ಮಾತನಾಡುತ ಅನುಸರಿಸಿ ಎನ್ನಯ
ಕರವ ಪಿಡಿದು ಮುದ್ದಾಡುತ ಮಧುರ ವಚನದಿಂ
ಕರೆದು ಚಂದುಟಿಗಳ ಚಪ್ಪರಿದು ಪರಿಪರಿ ಕಲೆಗಳ
ನರಿದು ಮನದಣಿವಂತೆ ಬೆರೆದು ನಲಿದವನ ಕಾಣದೆ ||೧||

ಇಂದು ಗಗನದಿ ಮೂಡಿದ, ಮಲಯಾಚಲದಿಂದ
ಮಂದಮಾರುತ ತೀಡಿದ, ಮಾರನು ಗಿಳಿಯ
ಚಂದದ ರಥವ ಹೂಡಿದ, ಮಲ್ಲಿಗೆ ಶಯನ ಮುಳ್ಳಾಗಿ ನಿನ್ನಿನಿರು
ಳೊಂದು ಯುಗವಾಗಿ ವಸ್ತ್ರಾಭರಣವು ಬೇಸರಾಗಿ ಬಾರದೆ
ಮನ ಮರುಗಿಸುವವನ ಕಾಣದೆ ||೨||

ರನ್ನದುಂಗುರುವನೀವೆನು ಕಾಂತನ ತೋರಲು
ಚಿನ್ನದೊಡ್ಯಾಣವಿಡಿಸುವೆನು ನಲ್ಲನ ಕೂಡಿಸಲು
ಮನ್ನಣೆ ವಸ್ತ್ರವ ಕೊಡುವೆನು ಬಲು ನಂಬಿದೆನು ನಾ
ತನ್ನ, ಈ ಪರಿ ಕಾಡುವರೆ ಎನ್ನ ಇಷ್ಟೊಂದು ಮುನಿಸೇ
ಕಿನ್ನು ನೀ ಬಿನ್ನೈಸುವುದು ಚನ್ನಶ್ರೀ ಪ್ರಭುವಿನ ಕಾಣದೆ ||೩||

೪೭

ರಾಗ: ಅಸಾವರಿ

ಮುನಿಸು ಮಾಡುವರೆ ನೀರೆ ಮನ್ಮನೋಹರೆ ಮನಸಿ [೧][ಜನ][೧]
ವನಿತೆ ನಿನ್ನಯ ಗುಣವ ಅನುದಿನಸ್ಮರಿಸೆನ್ನ
ಮನಸು ನಿಲ್ಲದು ಮೊಗದೋರೆ ಶೃಂಗಾರೆ
ಮುನಿವರೆ ಹಿತಕರೆ ಸಾರೆ ||ಪಲ್ಲ||

ನಡೆಗಂಜಿ ಆ ಹಂಸೆಯು, ನುಡಿಗಳುಕಿ ಅರಗಿಳಿಯು
ನಡುವಿಗ್ಹೆದರಿ ಕೇಸರಿಯು ಮುಡಿಗಂಜಿ ನವಿಲು
ಕುಡಿನೋಟಕಂಜುತೆರಳೆದೃಢಗೆಟ್ಟು ಮನಗುಂದಿ
ಅಡವಿ ಸೇರಿದವು ನೀ ಕಾಣೆ ಅಹಿವೇಣಿ ಮೃದುವಾಣಿ
ಸಮಗಾಣೆ ಜಾಣೆ ||೧||

ಪರಿಪೂರ್ಣ ಚಂದ್ರವದನೆ ಅರೆಬಿರಿದ ಕುಂದರದನೆ
ಮಾರನಸ್ತ್ರದ ಸದನೆ ಬರಿದ್ಯಾಕೆ ಕದನ ಅರವಿಂದದಳನಯನೆ
ಮರುಮಾತ ಬಿಡೆನ್ನೊಡನೆ, ಹರುಷದಿಂದಲಿ ಎನ್ನ ನೋಡೆ
ಮಾತಾಡೆ ಎನ್ನಕೂಡೆ ಹಟಬೇಡೆ ಪ್ರೌಢೆ ||೨||

ಕನ್ನೆ ಶಿರೋಮಣಿಯೆ ಮನ್ಮಥನ [೨][ಕಯ್ ಗಿಣಿಯೆ][೨]
ಉನ್ನತ ಸುಖದ ಖಣಿಯ ಎನ್ನೊಳೇಕೆ [೩][ಹೂ][೩] ಣೆಯೆ?
ನಿನ್ನಕಾಣದೆ ಮನಸನ್ಮತವಾಗದು ಚೆನ್ನಶ್ರೀ ಪ್ರಭುಪಾದ
ತತ್ಪರಳೆ ಪಿಕಗೊರಳೆ ಅಳಿಗುರುಳೆ ವಿಟಪರಳೆ ||೩||

೪೮

ರಾಗ: ಪೂರ್ವಿ

ಏ ತರಳೆ ನಾನೆಂತು ಜೀವಿಸಲಿ ನಲ್ಲನಿಂತು ಬಾರದಲೆ ||ಪಲ್ಲ||

ಮಾತುಗಳಿಲ್ಲದೆ ಯಾತರ ಮುನಿಸು ನಾ
ಸೋತೆನು ತನುಮನ ಚಿಕ್ಕಪ್ರಾಯದಲಿ ||೧||

೧-೧ ಜಾನ (ಮೂ); ೨-೨ ಶಮದಣಯ (ಮೂ); ೩-೩ ಹೊ (ಮೂ)

ಪರಿಪರಿ ಕಲೆಗಳ ನೆರೆದು ರಮಿಸಲು ತಾ
ಜರಿದು ಹೋದನು ಅರಘಳಿಗಿರದಲೆ ||೨||

ಕನ್ನೆ ಕೇಳಲೆ ಆ ಚನ್ನಶ್ರೀ ಪ್ರಭುವರ
ಎನ್ನ ಕಾಡಿದ ತನ್ನ ಮೊಗದೋರದಲೆ ನೀರೆ ||೩||

೪೯

ಬರಿದೆ ಎನ್ನ ನೀ ದೂರಿಕೊಂಬುವುದು ತರವೆ? ಬಲು ಸುಂದರಿಯೆ
[೧][ಇರುಳು ಬಂದು][೧] ಮಂದಿರದೊಳು ಗುರುತು ತೋರದ
[೨][ನೆರನ ನಾನರಿಯೆ][೨] ||ಪಲ್ಲ||

ಅಂಬುಜಾಕ್ಷಿ ನಿನ್ನ ಸಂಭ್ರಮ ಕೆಡಿಸಿದೆನೆಂಬ ಮಾತು ದಿಟವೇನೆ?
ಶಂಬರಾರಿ ಮೊನೆ ಅಂಬು ತಾಗಿ ಮನ ಇಂಬುಗೆಟ್ಟು ಬರುವನೆ ||೧||

ಕುಸುಮವೆಲ್ಲ ವಾಸಿಸಿತಲ್ಲಿ ಭ್ರಮರನು
ಬಿಸಜದಲ್ಲಿ ರಮಿಸುವುದು ರಸವನಿತ್ತು ಆದರಿಸು ಅಡ
ಗಿಸಿ ತನ್ನ ವಶವಾದೆ ಸಂಭ್ರಮಿ ಸವಿದು ||೨||

ಎನ್ನಮೇಲೆ ಮಾತ ನಿನ್ನು ಮಾಡುವುದು
ಸನ್ಮತವೇನೆ ಸುಜಾಣೆ?
ಭಿನ್ನಭಾವ ಬಿಡು ಮುನಿವುದಾಗದು
ಚನ್ನಶ್ರೀ ಪ್ರಭುಬಲ ಕಾಣೆ ||೩||

೫೦

ಬಾಲೆ ಒರಲುವಳು ಲೋಲ ನೀನಿಲ್ಲದರಸಿ
ಆ ಲಲನೆ ಕಾಮಜ್ವಾಲೆಯಿಂದ ನೊಂದು ||ಪಲ್ಲ||

ಸಿಂಧು [೩][ಗೆ ರಜನಿಗೆ][೩] ಸುಂದರ ಚಕೋರಿಗೆ
[೪][ವಿಧುಧರನಿಗೆ][೪] ಚಂದ್ರನಿಲ್ಲದ ಪರಿ ||೧||

೧-೧ ಇರುಳೆಂಬುದು (ಮೂ); ೨-೨ ನೆರನ ನಾರಿಯೆ (ಮೂ)
೩-೩ ರಜೆಗೆ (ಮೂ); ೪-೪ ವಿಧಿವರನಿಗೆ (ಮೂ)

ಜಾತಕವಕ್ಕಿಯು ನೂತನ ಮುಂಬನಿ ೧[ಯ]೧
ಝಿಲ್ಲೆ ನವಿಲು ಮೇಘಮನೋತು ಬಯಸು ೨[ವೊಲು]೨ ||೨||

ಕನ್ನೆಶಿಖಾಮಣಿ ನಿನ್ನ ನಂಬಿರುವಳು
ಚನ್ನಶ್ರೀ ಪ್ರಭು ಬೇಗ ಮನ್ನಿಸು ಅವಳನು ||೩||

೫೧

ಬಾಯನುಡಿ ಯಾತಕೆ ತೋಯಜಾಂಬಕಿ
ಪ್ರಾಯಮದದಿ [ಅವು] ಮಯ್ಯೆರಡಾಗಿರೆ ||ಪಲ್ಲ||

ಕಾಯಜನ ಪಂಚಸಾಯಕದಿ ನೊಂದು
ಪ್ರಯಾಸದಿಂದೆ ಲೋಲಾಯತಾಕ್ಷಿ ನುಡಿಯಳು ||೧||

ಸುಂದರಾಂಗಿಯು ನಂದವ ನೆನೆದು ನಮ್ಮ
ಮಂದಿರಕೆ ಬಾರನೆಂದು ಮಾತಾಡಳು ||೨||

ಆನೆ ಸಖಿಯೊಳನಗೆ ಭಿನ್ನ ಕಂಪಿಸುರೆ
ಚನ್ನಶ್ರೀ ಪ್ರಭು ನಿನ್ನ ಮರೆಗೆ ಬರುವೆ ||೩||

೫೨

ರಾಗ: ಸೋರಟ, ತಾಳ: ಆದಿ

ಇನಿಯನೇಕೆ ಬಾರ ಎಲೆ ಮಾನಿನಿಯೆ ಮೊಗವದೋರ ||ಪಲ್ಲ||

ವನಜಾನನೆಕೇಳ್ ಮನಸಿಜನಸ್ತ್ರವು
ತನುವ ಕೀಲಿಸುವುದೆನಿತು ಸೈರಿಸುವೆ
ಕನಕಕುಂಭಸ್ತನಿಯೆ ನಲ್ಲನ ಘನವಿಲಾಸ ನೆನಿಯೆ
ಮನದೊಳ್ ಅನಲವು ಪ್ರಜ್ವಲಿಸಿದ ಪರಿ
ಕನಸಿನ ಬಗೆ ಮಾಡಿದ ಮನಮೋಹಿನಿ ||೧||

ತರಳೇ ಪೋಗಿ ಕರೆತಾ ಎನ್ನೊಳು ವಿರಸವೇಕವಿರತ
ಸುರತ ಸಮಯವಿದು ಮೀರಿ ಚರಿಸುವುದು
ತ್ವರಿತದಿ ಬಾರದ ದುಗುಡವಿದುಚಿತವೆ? ||೨||

೧-೧ x (ಮೂ); ೨-೨ ವಳು (ಮೂ)

ಕನ್ನೆಪ್ರಾಯದಲ್ಲಿ ನಾನಂಬಿದೆ ತನ್ನನೇ ಮೊದಲಲ್ಲಿ
ಚಿನ್ಮಯರೂಪನು ಚನ್ನಶ್ರೀ ಪ್ರಭುತಾ
ಎನ್ನೊಳು ಮೋನಗೊಂಡಿಹ ಪರಿ ತಿಳಿಯದು ||೩||

೫೩
ತಿಳಿದು ಬಾರೆ ವಿನಯ[ದಿ]ನಲ್ಲನ ||ಪಲ್ಲ||

ಚಲ್ಲೆಗಂಗಳೆ ಕೇಳು ಫುಲ್ಲಶರನ ಹೊಲ್ಲ ಜ್ವಾಲೆಯಿಂದ
ತಲ್ಲಣಗೊಂಡಿತು ಮನ ||೧||

ಕುಡಿನೋಟದ ಬಾಲೆ ತಡ ಮಾಡದಿರು, ನೀ
ಬಿಡದುಪಚರಿಸುವ ಸಡಗರ ಒಲ್ಲೆ ನಾ ||೨||

ಹೊನ್ನಪುತ್ಥಳಿಯೆ ಬೇಗ ಮನ್ನಿಸಿ ಕರೆ ತಾ
ನಿನ್ನಾಣೆ ಮನಸೋತೆ ಚನ್ನಶ್ರೀ ಪ್ರಭುವಿನ ||೩||

೫೪
ರಾಗ: ಮಲ್ಹಾರ
ಬಾರಯ್ಯ ಬಾರೆನ್ನ ಮನೆಗೆ, ದಾರೇನೆಂದರು ನಿನಗೆ
ಮಾರನಂಬಿನೊಳ್ ಮನ ಸೇರಲು, ಎನ್ನನು
ಜಾರಿ ಬರುವರೆ ನಡುನೀರೊಳು ಕೈ ಬಿಟ್ಟು ||ಪಲ್ಲ||

ನಾರಿಯರೊಳಗೆನ್ನ ದೂರಿಕೊಂಬವರೇನೊ
ಇರದೆ ಬೇಡಿಕೊಂಬೆನು ವಾರಿನೋಟವು ಸಲ್ಲ ||೧||

ಗಂಧಕಸ್ತೂರಿ ನಲವಿಂದ ಹದಮಾಡಿ
ಬಂದೆನು ನಡೆ ಪೂಸಿಕೊಂಬ ಮಂದಿರದೊಳು ||೨||

ಕನ್ನೆ ಅಟ್ಟಿಯೆ ನಿನ್ನೆ, ಸೊನ್ನೆ ಭ್ರಷ್ಟವಾದಿಗಳನೆಲ್ಲ ಗಟ್ಟಿಮಾಡಿದೆನೇ,
ಬಿಡ "[ದೆ]" ನಾನು
ಎನ್ನೊಡನೇಕೆ ಮುನಿಸು ಚೆನ್ನಶ್ರೀ ಪ್ರಭು ನಿರ್ಮಾಯ ||೩||

---

೧-೧ ರದಿ(ಮೂ)

೫೫

ಇನಿತು ಬೋಧಿಸಿದವಳಾರು ನಿನಗೆ ಕೇಳಿನಿತು ||ಪಲ್ಲ||

ಕಾಣದೆ ನಿನ್ನರಘಳಿಗಿರಲಾರೆ
ಜಾಣ ಬಿಡಬೇಡೆನ್ನ ಮೇಲಿನ ಮಾಯಾ ||೧||

ಪರಿಪರಿಯಲಿ ನಿನ್ನ ಸ್ನೇಹವ ನೆನೆದು
ಕರಗಿ ಹೋಯಿತು ಎನ್ನ ಸುಂದರ ಕಾಯ ||೨||

ನಿನ್ನ ನಂಬಿದವಳನಿನ್ನು ಕಾಡುವರೆ
ಚನ್ನಶ್ರೀ ಪ್ರಭು ಎನ್ನಪ್ರಾಣದ ಪ್ರಿಯ ||೩||

೫೬

ರಾಗ: ಪೂರ್ವಿ

ಏನು ಕಾರಣೆನ್ನೊಳ್ ನುಡಿಯ
ಶಂಕರನೆಂದು ನಂಬಿದೆ ತನ್ನಡಿಯ ||ಪಲ್ಲ||

ಸೋಗೆಗಂಗಳೆ ನಾ ಬಹಳ ನಂಬಿದ್ದೆ ತನ್ನ
ಜಗದೊಳು ಮಾಡಿದ ಎನ್ನನು ನಗೇಡಿಯ ||೧||

ವಿರಹದಿಂದಲಿ ನಾ ತ್ವರಿತದಿ ಪೋಗಲು
ಹರುಷದಿಂದಲಿ ಕರೆದು ಕರಪಿಡಿಯ ||೨||

ಮುನ್ನಿತ್ತ ಭಾಷೆಗೆ ತಾ ತಪ್ಪಿದ
ಉನ್ನತ ಚನ್ನಶ್ರೀಪ್ರಭು ಎನ್ನೊಡೆಯ ||೩||

೫೭

ರಾಗ: ಸಾವೇರಿ

ಹಾರೈಸಿ ಬಂದೆ, ನಿನ್ನಯ ಪಾದ ಸೇರಿಸು ಎಂದೆ
ಕ್ರೂರಮನ್ಮಥನುರು ಬಾಣದಿ ಬಳಲಿದೆ
ಸೇರದೆ ಎನ್ನನು ದೂರ್[ದಿ]ನೋಡುವರೆ ||ಪಲ್ಲ||

---

೧-೧ ದ್ದೆ (ಮೂ)

ಸರಿಯೆ ನಾ ನಿನಗೆ ಎನ್ನೊಳು ರೋಷ ತರವೆ ಬಲವಗೆ
ತರುಣಿಯ ನೋಯಿಸುವುದು ಮಹಾದೋಷವೆಂ
ದಿರದೆ ಪೇಳುವ ಸುಪ್ರಾಜ್ಞರನುಡಿ ಸಟೆಯೆ ||೧||

ಕರುಣೆಗಳರಸ ನಿನ್ನ ನಂಬಿದ ತರುಣಿಯೊಳ್ ವಿರಸ
ಸ್ಮರಣೆ ಮಾತ್ರದೆ ಎನ್ನ ಹರಣವನುಳುಹಿದೆ
ಬರಿದೆ ಮೋಹಕೆ ಸಿಲ್ಕಿ ವ್ಯರ್ಥ ಬೆಂಡಾದೆ ||೨||

ನಿನ್ನನಿರುಳಲಿ ನಿನ್ನಯ ಭಾವ ಕಣ್ಣಲಿ ನೋಡಿ
ಮುನ್ನಿನಿ ಗುಣಗಳ ಮರೆದು ಬಂದೆನು ಈಗ
ಚನ್ನಶ್ರೀಪ್ರಭುವೆ ಪಾಲಿಸು ಎನ್ನ ಬಿಡದೆ ||೩||

೫೪

ರಾಗ: ಸೋರಟ

ನಾ ಬಂದೆ ನಿನಗಾಗಿ, ಬಂದೆ ನಾನು ನಿನಗಾಗಿ
ಇಂದು ಎನ್ನ ಮನದ ಸಂದೇಹ ನೀಗಿ ||ಪಲ್ಲ||

ಬಲು ಹಂಬಲಿಸಿ ನಿನ್ನಾ
ಕಲೆಗಳ ನೆನೆದು
ಕಳವಳಗೊಂಡು ಬೆಂಡಾಗಿ ||೧||

ವಂಚನೆಯಿಲ್ಲದೆ
ಸಂಚಲವಾಗಿ
ಪಂಚಬಾಣಗಳುರುತಾಗಿ ||೨||

ಎನ್ನ ಗುಣ ನೋಡದೆ
ಇನ್ನು ಪಾಲಿಪುದು
ಚನ್ನಶ್ರೀ ಪ್ರಭು ಶಿವಯೋಗಿ ||೩||

## ನೀತಿ - ಬೋಧಾರೂಪದ ಸ್ವರವಚನಗಳು

೧

ರಾಗ: ಸೋರಟ

ಎಲೋ ಹುಚ್ಚ ಪ್ರಾಣಿ ಮಾಡೊ ಗುರುಸ್ಮರಣಿ ||ಪಲ್ಲ||

ಮೃಡನ ನಾಮದ ಧ್ಯಾಸ ಬಿಡದೆ ನೀ ಮಾಡಿ
ನುಡಿ ಪಂಚಾಕ್ಷರವಾಣಿ ||೧||

ಮದನ ಚೇಷ್ಟೆಯೊಳು ಹಗಲಿರುಳಾಡಿ
ಅದರೊಳಗೇನೂ ಸುಖ ಕಾಣಿ ||೨||

ದುರುಳ ಬುದ್ಧಿಯನು ತ್ಯಜಿಸಿ ಬಿಸಾಡಿ
ಗುರು ಚನ್ನಪ್ರಭುವಿನೊಳ್ ಪಡೆ ವರ ಪ್ರಾಣಿ ||೩||

೨

ರಾಗ: ಕಲ್ಯಾಣಿ

ಲಿಂಗಾನಂದಾಮೃತ ಸುರಿ ಸುರಿ
ಅಂಗಜನಾಟವ ಜರಿ ಜರಿ ||ಪಲ್ಲ||

ಪಿಡಿದಿಷ್ಟಲಿಂಗವ ದಿಟ್ಟಿಸಿ ನೋಡಿ
ಕಡಿ ಅಷ್ಟಮದವೆಂಬ ಕರಿ ಕರಿ ಕರಿ ||೧||

ಭಾವಜಹರ ಮಹದೇವನ ಪಾಡಿ
ಕಾಮನ ಘನ ಸುಖ ಮರಿ ಮರಿ ಮರಿ ||೨||

ಹೊನ್ನು ಹೆಣ್ಣು ತನ್ನದೆನ್ನದೆ ಬಿಸಾಡಿ
ಚೆನ್ನಶ್ರೀ ಪ್ರಭುವಿನೊಳು ಬೆರಿ ಬೆರಿ ||೩||

೩

ರಾಗ: ಭೂಪಾಳಿ, ತಾಳ: ಏಕತಾಳ

ಮೃಡಪದ ಭಜನೆ ಮನದಲಿ ಬಿಡದೆ
ಅನುದಿನದಲಿ ನೀ ಬೇಗ ||ಪಲ್ಲ||

ಸತಿ ಸುತರತಿ ಹಿತರೆಂಬ ಭ್ರಾಂತಿಯ ಮರೆದು
ಸಿತಿಕಂಠನ ಸುಸ್ಮರಣೆ ಹಿತದಿಂದೀಗ ||೧||

ತನು ಧನ ಮೇಲಿನ ಮನಸಿನ ಮಮತೆಯ ಕಳೆದು
ಘನ ಗುರುಹಿರಿಯರ ಅನುಮತಿ ತಿಳಿದು ||೨||

ಸುರವರ ಪದವು ಮುಂತಾದವು ಅಸ್ಥಿರವು ನೀನೋಡೋ
ವರಕರ ಚನ್ನಶ್ರೀ ಪ್ರಭುವಿನ ಹರುಷದಿ ಕೂಡೋ ||೩||

೪

ರಾಗ: ಭೂಪಾಳಿ, ತಾಳ: ತ್ರಿವಿದಿ

ಮಾಡೋ ಗುರುಧ್ಯಾನ ಬೇಗ ಮಾಡೊ ಶಿವಧ್ಯಾನ ಬೇಗ
ಮಾಡೋ ಪ್ರಭುಧ್ಯಾನ ಬೇಗ ||ಪಲ್ಲ||

ಪ್ರಾತಃ ಕಾಲದಿ ನಿಮ್ಮ ಸ್ಮರಣೆಯ ಮಾಡಿದರೆ
ತತ್ಕಾಲಾಗುವುದು ಮೋಕ್ಷವೀಗ ||೧||

ಚಂಚಲವೃತ್ತಿಗಳ ಜರಿದು ಬೀಸಾಡಿ
ನಿಶ್ಚಲದಿಂದ ನಿಜಬ್ರಹ್ಮನಾಗಿ ಪಾಡಿ ||೨||

ತಂದೆ ಶ್ರೀ ಪ್ರಭುವಿನ ವಂದನೆಮಾಡಿ
ಚಂದಚಂದದಿಂದಲಿ ಪಾಡಿ ||೩||

೫

ರಾಗ: ಶೋಣತ, ತಾಳ: ತ್ರಿವಿದಿ

ಉಮಾಕಾಂತ ಪದಸ್ಮರಣರಹಿತ ಜನ್ಮಸುಡೋ ||ಪಲ್ಲ||

ಇನಾಗ್ನಿಚಂದ್ರನೇತ್ರ ಘನಗುರುಲಿಂಗ ಪದಕೆ
ತನುಮನಧನವಿನಿತು ಅರ್ಪಿಸದ ||೧||

ದಾನ ಭೋಗ ನಾಶ ಇವು ಮೂರುಸ್ಥಾನವಾದ ವಿತ್ತವನ್ನು
ನ್ಯೂನವಿಲ್ಲದೆ ನಂಬಿ ಕೆಡಬೇಡ ||೨||

ಮುನ್ನಬಹಳ ಜನ್ಮದಲ್ಲಿ ಬನ್ನಬಟ್ಟೆನೆಂಬುದರಿದು
ಚನ್ನಶ್ರೀ ಪ್ರಭುವಿನ ಪದದಲ್ಲಿ ಚಿತ್ತವಿಡೋ ||೩||

೬

ತಿಳಿದು ಕೆಡಬೇಡ ಕೆಡಬೇಡ
ಸಾಕ್ಷಾತ್ಕಾರ ನೀ ಮಾಡು ||ಪಲ್ಲ||

ಸ್ವಾತ್ಮಸುಖವ ನೀನರಿ[೧][ಯ][೧]ದೆ
ಆತ್ಮ ಹಮ್ಮುಮ್ಮತೆಗಳ ನೀ ಹಿಡಿದೆ ||೧||

ಮೂಲಬ್ರಹ್ಮವನರಿ[೨][ಯದೆ][೨]
ಕಲಹ ಮಮತೆಗಳ ನೀ ಹಿಡಿದೆ ||೨||

ಗುರುಪ್ರಭು ತಾನೆಂದರಿದು
ಲೋಗರ ಮಾತುಗಳನು ಜರಿದು ||೩||

೭

ಹೀನಭವದಿ ಜಿನುಗಿಬರ್ಪ ಬಿನುಗು ಜೀವವೆ
ತನುವ ಧರಿಸಿ ನೆನಹು ಮರೆದ ಮೂಢ ಜೀವವೆ ||೧||

ಗುರುಸ್ಮರಣೆಯ ನಿಜದಿ ನಂಬಿ ಮಾಡು ಜೀವವೆ
ಹರಶರಣರ ಭಜಿಸಿ ಮೋಕ್ಷ ಬೇಡು ಜೀವವೆ ||೨||

ಹಲವ ಯೋಚಿಸಿ ವ್ಯರ್ಥ ಕಾಲ ಕಳೆದೆ ಜೀವವೆ
ಮಲ ಮೂರ[೩][ರಲಿ][೩]ಸಿಲುಕಿ ಮದವ ತಳೆದೆ ಜೀವವೆ ||೩||

ಧನವು ಎನ್ನದೆಂದು ನಂಬಬೇಡ ಜೀವವೆ
ತನುವು ಮೊದಲೆ ತನ್ನದಲ್ಲ ನೋಡು ಜೀವವೆ ||೪||

ಶಿವಶ್ರವಣವನೇಕ ದೃಢದಿ ಕೇಳು ಜೀವವೆ
ಭವಹರನ ಪೂರ್ದಿ ಸುಖದಿ ಬಾಳು ಜೀವವೆ ||೫||

---

೧-೧ x (ಮೂ); ೨-೨ ದೆ (ಮೂ); ೩-೩ ರದಿ(ಮೂ)

ಸಕಲರಲ್ಲಿ ದಯಾಪಾಲಿಯಾಗು ಜೀವವೆ
ವಿಕಳ ಸಂಸ್ಕೃತಿ ಘೋರಗಳನು ನೀಗು ಜೀವವೆ ||೬||

ಭಿನ್ನಭಾವದಲ್ಲಿ[೧][ನೋವು][೧]ದಲ್ಲ ಜೀವವೆ
ಚನ್ನಶ್ರೀ ಪ್ರಭುನೊರ್ವನಲ್ಲದಿಲ್ಲ ಜೀವವೆ ||೭||

೮

ತ್ರಿಕರಣ ಶುದ್ಧನಾಗಿ ಗುರುಸೇವೆ ಮಾಡೊ
ವಿಕಳ ಸಂಸ್ಕೃತಿಯೊಳು ಸುಖವಿಲ್ಲ ನೋಡೋ ||ಪಲ್ಲ||

ಜಗವಿದು ಮಿಥ್ಯವೆಂಬುದು ನಿಶ್ಚಯ ಕೇಳೊ
ಅಗಲದೆ ಸುಜನ ಸಂಗತಿಯಲ್ಲಿ ಬಾಳೊ ||೧||

ಸಕಲ ಪ್ರಾಣಿಗಳೊಳು ದಯಾಪಾರನಾಗೊ
ಸುಖದುಃಖವೆರಡರ ಗಸಣಿಯ ನೀಗೊ ||೨||

ಗುರುಹಿರಿಯರೊಳು ಭೇದ ಕಲ್ಪಿಸಬೇಡೊ
ವರಕರ ಚನ್ನ ಶ್ರೀ ಪ್ರಭುವಿನ ಕೂಡೊ ||೩||

೯

ಪ್ರಭುವಿನ ಭಜಿಸೆಲೊ ಮೂಢ
ವಿಭುದಾಧಿಪನುತ ನಭಕುಂತಳಧರ
ತ್ರಿಭುವನಪತಿ ಸ್ಮರಣೆಯ ಮರೆಯಲುಬೇಡ ||ಪಲ್ಲ||

ಧನಸಂಪದ ಸ್ತ್ರೀ ತನುಜರು ಅಸ್ಥಿರ
ತನುವು ನಿನ್ನಯ ಸಂಗಡಬಾರದು ನೋಡ ||೧||

[೨][ಸಾಧುರ][೨] ಸಂಗದಿ ಶೋಧಿಸುತಾತ್ಮವ
ಭೇದವಳಿದು ನಿಜಪದ ಪಡೆಯಲೊ ಗಡ ||೨||

ಹಲವು ಸಂಸ್ಕೃತಿಗಳ ಬಲೆಯೊಳು ಸಿಲುಕದೆ
ಮಲಹರಣೆ ಚನ್ನಶ್ರೀ ಪ್ರಭುವಿನೊಳು ನೀ ಕೂಡ ||೩||

---

೧-೧ ನೊಯ್ಯ(ಮೂ); ೨-೨ ಸದುರ (ಮೂ)

೧೦

ಸ್ಮರಿಸು ನೀ ಬೇಗ ಶಂಕರನ[೧][ಶಿವ][೧] ಶಂಕರನ
ಒಲಿದು ನಾಗಚರ್ಮಾಂಬರನ ||ಪಲ್ಲ||

ಹರ ತ್ರಿಪುರಾರಿ ಕರುಣಾಕಾರಿ
ಸ್ಮರಹರ ಶರಣರಕ್ಷ ಗಂಗಾಧರನ ||೧||

ಶಶಿಕಲಾಧಾರಿ ಸಾಂಬ ಕೈವಾರಿ
ಪಶುಪತಿ ಸ್ಮಶಾನವಾಸ ಮದನಸಂಹರನ ||೨||

ಜಗದಾಧಾರಿ ಅಗಜೆವಿಹಾರಿ ಪರತರ
ಸುಗುಣ ಚನ್ನಶ್ರೀ ಪ್ರಭುವರನ ||೩||

೧೧

ಅಲಸದರ್ಚಿಸು ಪ್ರಭುಲಿಂಗನ, ಮೂರು
ಮಲವಿರಹಿತ ಭವಭಂಗನ ||ಪಲ್ಲ||

ಗಿರಿಜೆಯ ಗರ್ವಸಂಹಾರನ
ಕರಪೂರ ಸುಜ್ಞಾನಿಗೊಲಿದನ
ಪರಮೋಕ್ಷ ಪದವಿಯನಿತ್ತನ ಮಮ
ಕಾರನಾತ್ಮಜೆ ಮಾಯೆಯ ಗೆಲಿದನ ||೧||

ವರ ಗೊಗ್ಗಯ್ಯನ ಬೋಧಿಸಿದನ
ಕರದೊಳನುಮಿಷನಿಂಬಿಟ್ಟನ ಶೋಕ
ಪರ ಮುಕ್ತಾಯಿಯ ಸಂತೈಸಿದನ ಯೋಗಿ
ವರ ಸಿದ್ಧರಾಮನಿಗೊಲಿದನ ||೨||

ಬಸವಾದಿ ಪ್ರಮಥರುದ್ಧಾರನ, ಚೇಡ
ರೀಶ ಗೋರಕ್ಷನಿಗೊಲಿದನ ನಿ
ರ್ದೋಷ ಮುನಿಗಳ ರಕ್ಷಿಸಿದನ ಜಗ
ದೀಶ ಚನ್ನಶ್ರೀ ಪ್ರಭುವಿನ ||೩||

---

೧-೧ x (ಮೂ)

೧೨

ಎಲ್ಲ ಕೋಟಲೆ ಬೇಡೊ ಗುರು
ಅಲ್ಲಮನ ಸೇವೆ ಮಾಡೊ
ಖುಲ್ಲ ಸಂಗತಿಯಿಂದ ಕೇಡೊ ಗೌರೀ-
ವಲ್ಲಭನನು ನೀ ಪಾಡೊ ||ಪಲ್ಲ||

ಸಂಗನ ಶರಣರಿಗೊಲಿದ ಅವ
ರಂಗದಲಿ ತಾ ನಲಿದ
ಅಂಗಜನ ಗರ್ವ ಮುರಿದ ನಿಜ
ಜಂಗಮರೂಪಿಲಿ ಮೆರೆದ ||೧||

ಗಜಚರ್ಮಾಂಬರನಾದ ತನ್ನ
ಭಜಕರೊಳ್ ನಿತ್ಯ ವಿನೋದ
ಅಜಹರಿಗೋಚರನಾದ ಸತ್ವ
ರಜೋತಮಗುಣಗಳನಳಿದ ||೨||

ಸನ್ಮುನಿಗಳ ಬೋಧಿಸಿದ ಪರಿ
ಪೂರ್ಣದಯಾಳು ತಾನಾದ
ಉನ್ನತ ಮಾಯೆಯ ಗಿಲಿದ
ಚನ್ನಶ್ರೀ ಪ್ರಭು ತಾ ಸುಳಿದ ||೩||

೧೩

ಸದಾಶಿವನ ಸ್ಮರಿಸೆಲೊ ||ಪಲ್ಲ||

ಶಂಕರ ಬುಧಜನ ವಂದೇ ಮಹೇಶ ಸ್ವ
ಕಿಂಕರ ಪೋಷ ಶಶಿಧರನ
ಶಂಕುಕರ್ಣ ಗಜಕರ್ಣವರದ ಭ
ಸ್ಮಾಂಕಿತದೇಹ ಗಿರಿಜಾವರನ ||೧||

ಭಾಲನೇತ್ರ ಕರಿಕಾಲಪ್ರೀತ ಸುರ
ಜಾಲಪಾಲ ಗಂಗಾಧರನ
ನೀಲಕಂಠ ದಿಗ್ವಸನ ವರಸು
ಶೈಲವಾಸ ಕರುಣಾಕರನ ||೨||

ಪನ್ನಗಭೂಷ ಕೃಪಾರ್ಣವ ಸುಂದರ
ಮನ್ಮಥನಾಶ ತ್ರಿಪುರದಹನ
ಚಿನ್ಮಯ ದಕ್ಷ ಸುಚನ್ನಶ್ರಿಪ್ರಭುವರ
ಉನ್ನತಗುಣವೃಂದಾಗಾರನ ||೩||

೧೪

ರಾಗ: ಸೋರಟ

ಪುರಹರನ ಸ್ಮರಿಸೊ ಬೇಗ ಬಿಡದೆ ||ಪಲ್ಲ||

ಬಿನುಗುಭವಂಗಳೊಳ್
ಜಿನುಗಿ ಬಂದುದನರಿದು
ಘನ ಗುರುವನನುಸರಿಸಿ ||೧||

ತನುವ ಧರಿಸುತಲಿ
ವನಿತೆ ಸುತರೊಳಿರ್ದು
ಅನುದಿನ ಮನ ದೃಢಕರಿಸಿ ||೨||

ಧನ್ಯರ ಪೂಜಿಸಿ
ಉನ್ಮತವಳಿಯುತ
ಚನ್ನಶ್ರೀ ಪ್ರಭುವರನ ಬೆರಸಿ ||೩||

೧೫

ಭಜಿಸೊ ನೀ ಬಿಡದೆ ಬೇಗ
ಅಜಕಪಾಲನನೀಗ ||ಪಲ್ಲ||

ಸತಿ-ಸುತರೊಳತಿ ಮಾಡಲು ಪ್ರೀತಿ
ಸದ್ಗತಿ ದೊರಕುದ್ಹೇಗೋ ಹೋಗೋ ||೧||

ಶ್ರೀಮತ್ಪಾರ್ವತಿಪತಿಪದ ಭಕ್ತಿ
ಯುತನಾಗಿ ಸಂಸೃತಿ ನೀಗೋ ನೀಗೋ ||೨||

ಚನ್ನಶ್ರೀ ಪ್ರಭುವಿನ ಉನ್ನತ ಕರುಣವನು
ಪಡೆದು ಮುಕ್ತನಾಗೋ ಆಗೋ ||೩||

೧೬

ರಾಗ: ಧನಾಶ್ರೀ ತಾಳ: ಆದಿ

ತೋರದು, ದುಸ್ಸಂಸಾರ ವಿಷಯದಲಿ
ಸೇರಿದ ಜನರಿಗಿದು ನಿಶ್ಚಯ
ಸಾರಾಸಾರವಿಚಾರವರುಹಿಸುವ ಉದಾರ
ಗುರುವರಕೃಪಾ ಕೈ ಸಾರದೆ ಕರ್ಮಾ
ಗಾರದಿ ಸಿಲ್ಕಿಹ ನರರಿಗೆ ಅಸಾಧ್ಯವದು ನಿಶ್ಚಯ ||ಪಲ್ಲ||

ಮಾಮಿರ ಸಂಸ್ಕಾರಜನಿತ ಅವಿಚಾರವೆಲ್ಲ ಪರಿಯು
ಅಪಾರವಿಶ್ವವಿದು ನಾರಿಪ್ಯಾಪಾರ ತೋರದಲ್ಲಿಷ್ಟರಿಯು
ನಿಶ್ಚಯ ||೧||

ಈಗ ಜ್ಞಾನಾಂಜನಯೋಗವಾದ ನಯನಾಗಲು - ಮಗಿಂದು
ಬೇರಾಗಿ ತೋರ್ಪತ್ರ್ಯಜಗವು ಕಾಣಸುವದೀಗ ಬ್ರಹ್ಮವೆಂದು
ನಿಶ್ಚಯ ||೨||

ಚನ್ನಶ್ರೀ ಪ್ರಭುವರನುಸ್ಮತ ಕರುಣವನ್ನು ಪಡೆದು ನಿಂದ ಹೆಮ್ಮೆ
ಧನ್ಯರಿಗೆ ಜಗವಿನ್ನು ತೋರುವುದುಶೂನ್ಯಬ್ರಹ್ಮವೆಂದು
ನಿಶ್ಚಯ ||೩||

೧೭

ರಾಗ: ಆರಬಿ

ಭಜರೇ ಶ್ರೀ ಸೋಮಂಧೃತ ಶಶಿಧರ ನಾಮಂ
ಪುರಹರಮಖಿಲೇಶ್ವರಮಭಿರಾಮಂ
ಸುರನರ ಮನುಮುನಿಸ್ತೋಮ ಲಲಾಮಂ ||ಪಲ್ಲ||

ಲೋಲಂ ವಿಲಸಿತ ವೈಶ್ವಾನರ ಭಾಲಂ ತ್ರಿಪುರಾಸುರ ಸುಶಿರಮೂಲಂ
ಸುರರಾಜ ತನಯ ಪ್ರತಿಪಾಲಂ ಪರಿನುತ ವೇದಾಗಮ ಶ್ರುತಿ ಜಾಲಂ
ಧೃತಸರಸಿಜಭವ ಮೂರ್ಧ ಕಪಾಲಂ ||೧||

ಧೀರಂ ಸಾಮಜದಾನವಸಂಹಾರಂ
ಚತುರ್ದಶಭುವನಜನಾಧಾರಂ

ಅಂತಕಮದಘನಸುಸಮೀರಂ
ವಂದಿತಜನ ಹೃದಯಾರಾಮವಿಹಾರಂ
ಭೀಮ ವರದಮಗಜೆ ವಿಹಾರಂ ||೨||

ಈಶಂ ಭಸ್ಮಾಂಕಿತ ಗಾತ್ರಂ ಅಗೇಶಂ
ಸುಂದರ ಮನ್ಮಥ ತನುನಾಶಂ
ವಿಷಧರಂ ಅಹಿಕರ್ಣವಿಭೂಷಂ
ಸುರುಚಿರರಜತಾಚಲ ಸುನಿವೇಶಂ
ಚನ್ನಶ್ರೀ ಪ್ರಭು ಅರ್ಚಿತಜನಪೋಷಂ ||೩||

೧೮

ರಾಗ: ಅಸಾವರಿ

ಧ್ಯಾನಿಸಿ ತಿಳಿ ಬೇಗದಲಿ ಮಾನಹೀನ ಮದನಹೂಣೆಯ
ಹೋಗದಲಿ ||ಪಲ್ಲ||

ಕಾಲಕರ್ಮದ ಭಯಗಳ ಈಡಾಡಿ
ಜ್ವಾಲನೇತ್ರನ ಹೃದಯದಿ ಸೂಡಿ ||೧||

ಮಡದಿಮಕ್ಕಳ ಹಂಬಲ ಬಿಟ್ಟು
ದೃಢದಿ ಗುರುಪಾದದಿ ಮನವಿಟ್ಟು ||೨||

ಪನ್ನಗಧರನ ಸ್ಮರಣೆಯ ಮಾಡಿ
ಚನ್ನಶ್ರೀ ಪ್ರಭುವಿನ ಪ್ರೇಮದಿ ಕೂಡಿ ||೩||

೧೯

ರಾಗ: ಸೋರಟ

ಎಲೋ ಹುಚ್ಚಪ್ರಾಣಿ ಮಾಡು [೧][ನೀ][೧] ಗುರುಸ್ಮರಣಿ ||ಪಲ್ಲ||

ಮೃಡನ ನಾಮದ ಧ್ಯಾನ ಬಿಡದೆ ನೀ ಮಾಡಿ
ನುಡಿ ಪಂಚಾಕ್ಷರಿ ವಾಣಿ ||೧||

---

೧-೧ x (ಮೂ)

ಮದನಚೇಷ್ಟೆಯೊಳ್ ಹಗಲಿರುಳಾಡಿ
ಅದರೊಳಗೇನೂ ಸುಖ ಕಾಣೆ ||೨||

ಮರುಳ ಬುದ್ಧಿಯನೆಲ್ಲ ತ್ಯಜಿಸಿ ಈಡಾಡಿ
ಗುರು ಚನ್ನಪ್ರಭುವಿನೊಳ್ ಪಡೆ ವರ ಪ್ರಾಣ ||೩||

೨೦
ಶಿವಯೊಗವ ಸಾಧಿಸು ಮನುಜ
ಭವಭಯಗಳ ತ್ಯಜಿಸು ||ಪಲ್ಲ||

ಆಸೆಯಳಿದು ನಿರಾಸೆಯಲಿಪ್ಪರ
ದೂಷಿಸದವರೊಳ್ ಭೇದಿಸು ಮನುಜ ||೧||

ಸತ್ಯಶರಣರೊಳ್ ಮಿಥ್ಯವ ಮಾಡದೆ
ಆತ್ಮಜ್ಞಾನವ ಶೋಧಿಸು ಮನುಜ ||೨||

ಗನ್ನಘಾತಕರೊಡನಾಡಿ ಕೆಡದೆ ನೀ
ಚನ್ನಶ್ರೀ ಪ್ರಭುವಿನೊಳುದಿಸು ಮನುಜ ||೩||

೨೧
ರಾಗ: ಭೈರವಿ
ಹರನ ಭಜಿಸೋ ನೀ ಬೇಗನೆ ||ಪಲ್ಲ||

ದುರುಳರಸಂಗವನಿರದೆ ಮಾಡಿ ನೀ
ಮರುಳಾಗಬೇಡಯ್ಯ ಮನುಜ ||೧||

ಸತಿ-ಸುತರಿವರತಿ ಹಿತರೆನ್ನದೆ ನಿನ್ನ
ಗತಿಯ ಸಾಧಿಸಿಕೊಳ್ಳಯ್ಯ ಮನುಜ ||೨||

ಸನ್ಮತರಿಂದಲಿ ಚನ್ನಶ್ರೀ ಪ್ರಭುವಿನ
ನಿನ್ನ ಮನದಲ್ಲಿ ಅರಿಯಯ್ಯ ಮನುಜ ||೩||

೨೨

ರಾಗ: ಭೈರವಿ

ಮಾಡೊ ಗುರುಧ್ಯಾನ ಸದಾ ನೀನು ||ಪಲ್ಲ||

ಹಲವು ಯೋಚಿಸಿ ದಿನಕಳೆಯಲಿ ಬೇಡವೊ
ಒಲಿದು ಸುಜನರೊಡಗೂಡೋ ||೧||

ಸಕಲರ ಮೇಲೆ ದಯಾಭರಿತ ನೀನಾಗೋ
ವಿಕಳ ದುರ್ಗುಣಗಳ ನೀ ನೀಗೋ ||೨||

ತನುವಿರಲಾತ್ಮಸ್ವರೂಪವ ಕಾಣೋ
ಮನಸಿನ ವಂಚನೆ ಮಾಣೊ ||೩||

ಆರುಚಕ್ರಗಳಲಿ ಸನ್ಮತನಾಗಿ
ಮೀರಿದುನ್ಮನಿಯೊಳು ಸಾಗಿ ||೪||

ಅನ್ಯವಿಧಿಯನಳಿದಾತ್ಮದಿ ಸಂದು
ಚನ್ನಶ್ರೀ ಪ್ರಭುವಿನ ಹೊಂದು ||೫||

## ಆರತಿ - ಮಂಗಳಾರತಿ ಪದಗಳು

೧

ರಾಗ: ಸಾರಂಗ ತಾಳ: ತ್ರಿತಾಳ

ಮುತ್ತಿನಾರತಿ ಎತ್ತಿ ಬೆಳಗಿ
ಯತಿವರ ಪ್ರಭುರಾಯಗೆ ||ಪಲ್ಲ||

ಶಶಿಧರದೇವ ತಾನು ಧರೆಗಿಳಿದು ಬಂದನು
ಎಸೆವ ಬಸವಗೆ ಜ್ಞಾನ ಬೋಧಿಸಿ ||೧||
ಭಸಿತನಿಟ್ಟ ಮಗಿಯಗೆ

ನಾಗಚರ್ಮವ ಪೊದ್ದುಮೆರೆವನು
ನಾಗಭೂಷಣ ದೇವನು
ನಾಗಾರಿಗಮನ ವಾಗೀಶ ವಂದಿತ
ಗಂಗೆಧರಿಸಿದ ದೇವಗೆ ||೨||

ತಾರಕಾಪುರಭಸ್ಮ, ತನ್ನ
ಚರಣಭಕ್ತರ ಪೊರೆವನು
ಅರುಣಕೋಟಿ ಪ್ರಕಾಶ ಶೋಭಿತ
ಪರಮ ಅಲ್ಲಮಪ್ರಭುವಿಗೆ ||೩||

ಕರಿಕಾಲ ಚೋಳಗೆ ಒಲಿದ ದೇವನು
ಕರುಣದಿಂದಲಿ ಬಂದನು
ವೀರಧೀರ ಕೃಷ್ಣೇಂದ್ರ ಸತಿಗೆ
ವರವ ಕೊಟ್ಟ ಪ್ರಭುವಿಗೆ ||೪||

ಚೆನ್ನ ಮಹೇಶಲಿಂಗ ದೇವನು
ಹೊನ್ನ ತ್ರಿದಳದಲಿ ನಿಂದನು
ಉನ್ನತೋನ್ನತ ಚರಣ ತೋರಿಸಿ
ಎನ್ನ ಪೋಷಿಪ ಪ್ರಭುವಿಗೆ ||೫||

೨

ರಾಗ: ಸಾರಂಗ, ತಾಳ: ಝಂಪಾ

ಆರತಿಯನು ಎತ್ತುವೆ ಪ್ರಭುವಿಗೆ ||ಪಲ್ಲ||

ಕಂದುಗೊರಳನಿಗೆ ಇಂದುಶೇಖರಗೆ
ಕಂದರ್ಪಹರ ಶಿವ ನಂದಿವಾಹನಗೆ ||೧||

ಕಾಲಹರ ಕಪಾಲಧರನಿಗೆ
ಶೂಲಧರ ಶಂಕರ ಶುಭಗಾತ್ರಗೆ ||೨||

ಹರಿ ವಿಧಿ ಸುರಗಂಧರ್ವ ಸೇವಿತಗೆ
ವರ ಚನ್ನಶ್ರೀಪ್ರಭು ಕರುಣಸಾಗರಗೆ ||೩||

೩

ಮಂಗಳಂ ಅಜಾಚ್ಯುತಾರ್ಚಿತ ಚರಣ ಕಮಲಾಯ
ಮಂಗಳ ಮಗೇಂದ್ರ ತನಯಾಧವಾಯಾ
ಮಂಗಳಮಸಾರ್ಚಿತ ಜನಾಭೃಪವಮಾನಾಯ
ಮಂಗಳ ಮಹಿಕಲಿತ ಕರ್ಣಾಯತೇ ||೧||

ಹೈಮವತ್ಯಾನನ ನಿಶಾಕರ ಚಕೋರಾಯ
ಸೋಮಬಿಂಬಾಕಲಿತ ಸುಂದರ ಜಟಾಗ್ರಾಯ
ಕಾಮಮದಧರಣೀಧರ ಕುಲಿಶಾಯತೇ ||೨||

ಸ್ಕಂದ ಗಜಮುಖಿವದನ ಪಂಕಜದ್ವಿರೇಫಾಯ
ಅಂಧಕಾಸುರ ವನಧಿಬಾಡಭಾಯ
ಮಂದರಾಚಲ ವಿಮಲಮಂದಿರನಿವಾಸಾಯ
ವಂದಿತಾ ಸುರಾಸುರಗಣೇಂದ್ರಾಯ ತೇ ||೩||

ಸನ್ಮತಾಗಮನಿಗಮ ಅಗೋಚರ ಚರಿತ್ರಾಯ
ಮನ್ಮಥ ಸರೋಜ ತಾರಾಧಿಪಾಯ
ಚಿನ್ಮಯ ಶ್ರೀ ಪ್ರಭುವರ್ಣಿ ವರದಾಯ ತೇ ||೪||

೪

ಮಂಗಳಾರತಿಯ ತಂದೆತ್ತಿರೆ|ಪ್ರಭು-
ಲಿಂಗ ನಿರಂಗ ಸಂಗನಿಗೆ, ಮದಭಂಗನಿಗೆ ಉತ್ತುಂಗನಿಗೆ ||ಪಲ್ಲ||

ಹಸಿರು-ಹಳದಿ-ಕೆಂಪು ವರ್ಣಶಾಲಿಯನುಟ್ಟು
ಕುಸುರಿಗೆಲಸದ ಕಂಚುಕಿ ತೊಟ್ಟು
ಅಸಮಾಕ್ಷನೆದುರಲಿ ಶಶಿಮುಖಿಯರೊಂದಿಸಿ ನಿಲುತ
ಪಾಲಿಸು ಎನುತ ಹರಸಿ ಬೇಡುತ
ಮಿಸುನಿ ಆರತಿಯ ತಂದೆತ್ತಿರೆ ||೧||

ತನುತಳಿಗೆಯೊ ೧[ಳ್ಮ್ನ]೧ ವೆಂಬಾರತಿಯೊಳು ತ್ರಿ
ಗುಣಬತ್ತಿ ಮನದ ಕಳಸಹೂಡಿ

೧-೧ ಳನು (ಮೂ)

ನೆನಹೆಂಬ ತೈಲವನೆರೆದು ಜ್ಞಾನಜ್ಯೋತಿಯ
ನನುಗೊಳಿಸಿ ಕಾಲನ ಹರಿಸಿ ಮುಕ್ತಿಯ ಗಳಿಸಿ
ವಿನಯರಾರುತಿಯ ತಂದೆತ್ತಿರೆ ||೨||

ಕನ್ನೆಯರುಗಳು ಸಂಪನ್ನ ತ್ರೈಲೋಕದಿ
ಮನ್ನಣೆಯುತರು ಮೋಹಿನಿಯರು
ಚನ್ನ ಶ್ರೀ ಪ್ರಭುವೆಂಬ ವರ ಗುರುರಾಯನ
ಬಣ್ಣಿಸುತ ಬೇಗ ಮನ್ನಿಸುತ ಚೆನ್ನೇರಾರತಿಯ ತಂಡೆತ್ತಿರೆ ||೩||

೫೫

ಆರತಿ ಎತ್ತುವೆನಿಂದು ಮಹಾಮೂರಿತಿ ಎನ್ನ
ಕರಸ್ಥಲಕೆ ಬಂದ ಮಾರಸಂಹರನಿಗೆ ||ಪಲ್ಲ||

ಘೋರತರ ವಿಷಸೇವಿಸಿದವನಿಗೆ
ಮುರಾರಿಯಿಂ ನಮಿತನಿಗೆ ಚಂ-
ದಿರಮುಖಿ ಪಾರ್ವತಿಯರಸನಿಗೆ ||೧||

ಮುನಿನತಪದಶತಪತ್ರನಿಗೆ ಇನ ಅಗ್ನಿನೇತ್ರನಿಗೆ
ಘನಪ [ರ್ವ]ತ ಮಹಾಶರಪಾತ್ರನಿಗೆ
ವನಜಾನನೆ ಪಾರ್ವತಿಯರಸನಿಗೆ ||೨||

ಅಸುರರ ಗೆಲಿದನಿಗೆ ಬಿಸಜಾಕ್ಷಗೊರವನಿತ್ತನಿಗೆ
ಕುಸುಮಶರನನಿಟ್ಟೊರಸಿದಗೆ
ಶಶಿಮುಖಿ ಪಾರ್ವತಿಯರಸನಿಗೆ ||೩||

ಮುಪ್ಪುರಹರ ನಿರ್ಮರಣನಿಗೆ ಕಂದರ್ಪಜನಕನತ ಚರಣನಿಗೆ
ಕಪ್ಪುಗೊರಳ ಅಹಿಭರಣನಿಗೆ
ಸರ್ಪವೇಣಿ ಪಾರ್ವತಿಯರಸನಿಗೆ ||೪||

ವ್ಯಾಳನ ಧರಿಸದಗೆ ಭಾಳಾಂಬಕ ಅಭಯಕರಗೆ
ನೀಲಕಂಠ ಚನ್ನಶ್ರೀ ಪ್ರಭುವಿಗೆ
ನಳಿನಮುಖಿ ಪಾರ್ವತಿಯರಸನಿಗೆ ||೫||

---

೧-೧ x (ಮೂ)

೬

ಜಯಜಯ ಆರತಿ ಕಾಮಸಂಹಾರಿ
ಮಾಯಾಮದಹರನಮಿತ ಮುರಾರಿ ||ಪಲ್ಲ||

ಕನಕ೧-೧[ಮಹೀಧರ]೧-೧ ಧೃತಕೋದಂಡ
ಸನಕಾದಿ ಮುನಿಹೃತ್ಕುಂಜ ಮಾರ್ತಾಂಡ ||೧||

ಮಾಲ ಅಸುರಶಿರಲಕ್ಷಿತವಕ್ಷ
ವ್ಯಾಲಧರ ಶರಣ ಸುರವೃಕ್ಷ ||೨||

ಸನ್ನುತಾಮರಗಣ ಬಸವ ಸಂಪ್ರೀತ
ಚನ್ನಶ್ರೀ ಪ್ರಭು ಪಾಲಿಸು ಪ್ರಖ್ಯಾತ ||೩||

## ಇತರ ಸ್ವರವಚನಗಳು

೧

(ಪಾಲಕಿ ಉತ್ಸವ)

ಉಪಮಿಸಲಳವೆ ಅಪರಿಮಿತದೊಸಗೆಯ ನಿತ್ಯಪ್ರಭುವೆ ಮಹಾ-
ತ್ರಿಪುರಸಂಹಾರ ಅಪರಪರಮಾತ್ಮನೆ ನಿತ್ಯಪ್ರಭುವೆ ||ಪಲ್ಲ||

ಪವಳಮಾಣಿಕದಿಂದ ಸಮೆದ ಅಂದಳದೊಳು ನಿತ್ಯಪ್ರಭುವೆ, ಗುರು
ಧವಳಪರ್ವತದಂತೆ ಮಿರುಗುವ ಮಂಟಪ ನಿತ್ಯ ಪ್ರಭುವೆ ||೨||

ಎತ್ತಿದ ವೃಷಭಧ್ವಜಗಳು ವಿರಾಜಿಸೆ ನಿತ್ಯಪ್ರಭುವೆ, ಸುತ್ತ
ಮುತ್ತಲು ಎಸೆವ ಉಡಾಸ ಚಾಮರಗಳು ನಿತ್ಯಪ್ರಭುವೆ ||೩||

ಉತ್ತಮ ಸತ್ತಿಗೆ ಸೂರ್ಯಪಾನಗಳಿಂದ ನಿತ್ಯಪ್ರಭುವೆ, ನವ
ರತ್ನದ ಕೈಪಿಡಿ ಶಿಖಿಯ ಗರಿಗಳಿಂದ ನಿತ್ಯಪ್ರಭುವೆ ||೪||

ರಜತ ಕನಕದಂಡವಿಡಿದು ಕೈವಾರಿಸಿ ನಿತ್ಯಪ್ರಭುವೆ
ಭಜಕಪೋಷಣನಿದಿರಲಿ ಮಾಯಾಮರ್ತೂಪ ನಿತ್ಯಪ್ರಭುವೆ ||೫||

೧-೧ ಮೇದಿಸ (ಮೂ)

ನುಡಿವ ಕಾಳಿಗಳು ಆರ್ಭಟಿಸು[೧][ವ]ಡ[೧]ಮಾಮಿಯು ನಿತ್ಯಪ್ರಭುವೆ
ಕಡಲ ಧ್ವನಿಯ ತಿರಸ್ಕರಿಸುವ ಭೇರಿಯು ನಿತ್ಯಪ್ರಭುವೆ ||೬||

ಶಂಕು ಜಾಗಟೆ ಘಂಟೆ ಬರುಗು ನಪೇರಿ ನಿತ್ಯಪ್ರಭುವೆ
ಬಿಂಕದಿ ನುಡಿವ ಸನಾದಿ ಸಮ್ಮೇಳದಿ ನಿತ್ಯಪ್ರಭುವೆ ||೭||

ಹುಡುಕ್ಕು ಮದ್ದಳಿ ಸ್ವರಮಂಡಲ ವೇಣೆಯು ನಿತ್ಯಪ್ರಭುವೆ, ಸ್ವರ-
ವಿಡುವ ಉಪಾಂಗ ತಂಬುರಿ ತಾಳ ಉಚಂಗ ನಿತ್ಯಪ್ರಭುವೆ ||೮||

ನೃತ್ಯದಿ ಊರ್ವಶಿಗೆಣೆಯಹ ಪಾತ್ರವು ನಿತ್ಯಪ್ರಭುವೆ, ಜನ
ರರ್ತಿಲಿ ನಚ್ಚಣೆಸಿಯಮ ಪೆರ್ಚುಗೊಳಿಸುತ ನಿತ್ಯಪ್ರಭುವೆ ||೯||

ಕುಡುತೆಗಂಗಳೆಯರಾರತಿಯ ಪಿಡಿದಿನ್ನು ನಿತ್ಯಪ್ರಭುವೆ
ಆಡಿ ಇಡುತ ಪಾಡುವ ಶುಭಸ್ತೋತ್ರ ಶೋಭಾನ ನಿತ್ಯಪ್ರಭುವೆ||೧೦||

ವರ್ಣಿಸಲಹುದೆ ಅಜಗೆ, ಮಹಾಶೇಷಂಗೆ ನಿತ್ಯಪ್ರಭುವೆ, ದ-
ಯಾರ್ಣವ ಚನ್ನಶ್ರೀಪ್ರಭುವಿನ ಮಹಿಮೆಯ ನಿತ್ಯಪ್ರಭುವೆ ||೧೧||

೨

ರಾಗ: ತೋಡಿ, ತಾಳ: ಬಿಲಂದಿ

ಕವಿಗಳೆ ಇವರು ಕವಿಗಳೆ |ಒಂದು|
ರೂಪಿಯ ಆಶೆಗಾಗಿ|ಬಡ್ಡ|
ಭವಿಗಳನ್ನು ಪೊಗಳುವವರು ||ಪಲ್ಲ||

ಬಂದು ಸಕಲ ಜನ್ಮದಲ್ಲಿ
ನೊಂದು ಸರ್ವಾವಸ್ಥೆಯಲ್ಲಿ
ಇಂದುಧರನ ವಂಶವಲ್ಲದ
ಮಂದಜನರ ಸ್ತುತಿಸುವವರು ||೧||

ಪೂರ್ವಕವಿಗಳನ್ನು ಜರೆದು
ಸರ್ವರೆನ್ನ ಸಮವಲ್ಲರೆನುತ
ಗರ್ವದಲ್ಲಿ ತಿರುಗಿ ವರದ
ಪಾರ್ವತೀಶನ ಕಾಣದವರು ||೨||

---

೧-೧ x (ಮೂ)

ಕೊಡಲು ಸ್ತುತಿಸಿ ಈಯದಿರಲು
ಒಡನೆ ಜರೆದು ಹಲವ ಯೋಚಿಸಿ
ಒಡೆಯಶ್ರೀ ಚೆನ್ನಪ್ರಭುವಿನ
ಅಡಿಯನರಿದು ಭಜಿಸದವರು ||೩||

೩

ರಾಗ: ಸಾರಂಗ

ಮಗಿಯೆಂಬರಯ್ಯ ನಿಮ್ಮ ಮಕುಟವರ್ಧರು।ನಿಮ್ಮ
ಗಗನಗಂಭೀರ [೧][ರ][೧]ರ ಗೋಚರರು। ಕಾ [೨][ಲೂ][೨] ರರು
ಮಗಿಯೆಂಬರಯ್ಯ ನಿಮ್ಮ ಪ್ರಮಥರು, ಗಣಂಗಳು
ಮಗಿಯಂಬರಯ್ಯ ನಿಮ್ಮ ||ಪಲ್ಲ||

ಎರಡೇಳು ಧಾತ್ರಿಯೊಳು ಎಸೆವ ಸುಕ್ಷೇತ್ರವು
ಸರೋವರಕೊಳ್ಳ ನಿಧಿ ಸುರಸ [೩][ಸಿರಿಗಳ ಶರಧಿ][೩]
ಕೆರೆ ತೆರೆಗಳು ಕೋಟಿ ಅರ್ಧಸಪ್ತವದಾಟಿ
ಪರಿಪರಿಯಲಿಹ ಆಲ ಪುಣ್ಯಸ್ಥಲದ ಫಲ
ಗುರುರಂಘ್ರಿಜಲಬಿಂದುವ ಸಾಸಿರದಭಾಗ ಸರಿ ಗೆಗರಿ ಎಸಳೆಂದು ವಾ
ಸರತೂಕ ಬರಲಾರದೆ ಬರೆಬಾಯಲಿ ಬಾಂಧವಾ ||೧||

ಫಣಿನಾದ ನಾಲ್ಕರು ಪ್ರಬುಧ ವಿವೇಕರು
ಮಣಿ ಮಂತ್ರ ಮೂಲನಾಮಾ ಮೃತಶೀಲರ
ಅಣಿಮಾದಿ ಸಿದ್ಧರ ಅಕಳಂಕಲರ್ದರಂ?
ಹೆಣೆದಿಹಬ್ರಹ್ಮಾಂಡ ದೊಳ್ಪದವರ್ದಂಡ
ತಣಗಿನಂಘ್ರಿಯ ರೋಮವಾಮುಂದಾದ ರೂಪ
ಎಣೆಯೊಳಿಲ್ಲ ಸ್ತೋಮವಾಹೊಂದಿದ ರೂಪ ಅಗಣಿತ
ಗಣತೋ ಶಂಭುಲೋಕದ ಭೀಮ ||೨||

ವಿಗಳೆ ವಿಷ್ಣುವು ದುಗುಣ ಪೌರಾಣವು। ನಿಗಮ ನಿಕಣಸೂತಿ
ನೀತಿ ನಿಕ್ರಣ ನೀತಿ। ಮುಖನಾಲ್ಕು ದಶಶಸ್ತ್ರ।

---

೧-೧ ರು(ಮೂ); ೨-೨ ಲ (ಮೂ); ೩-೩ ಸಿರಂಗಗಳ (ಮೂ)

ಪೊಗಳಲಳವೆನಿಂಪು। ದುಗುಡ ಗುರುವಿನ ಸೊಂಪು
ಬಗೆಭಕ್ತಿಗಣಸ್ತೋಮವಾ। ಹಿಂಗುತಿರೆ ಮಿಗೆ।
ತೇರದಾಳ ಗ್ರಾಮದ ಯಾತ್ರಮಾಯಮಗೆ
ಚನ್ನಪ್ರಭುವೆಂಬನಾಮವಾ* ||೩||

ಳ

ರಾಗ: ಸೋರಟ

ಆಡಿದಳಾ ಮಾಯೆ ||ಪಲ್ಲ||

ಮಧುಕೇಶ್ವರನ ಸಮ್ಮುಖದಲಿ ನಿಂದು ನುಡಿಸಿದಳು ತನ್ನ
ಪಾದದ ಗೆಜ್ಜೆಯ ಜಣ್ ||೧||

ಜಗದ ಜಂತ್ರವನಗಲಿ ತೋರಿಸುವ
ಸೊಗಸಲಿ ಪ್ರಭು ಮದ್ದಳೆಯನು ನುಡಿಸಿದನು ಠಣ್ ||೨||

ಕನ್ನೆಯರುಗಳು ಆ ಚನ್ನಶ್ರೀಪ್ರಭುವಿನ
ಮನ್ನಿಸುತ ಪಾಡಿದರು ಗಾನವ ತನ್ ||೩||

---

* ಈ ಹಾಡು ತೀರ ಅಶುದ್ಧವಾಗಿದೆ.

೬

ರಾಗ: ಸಕಲಾಭರಣ, ತಾಳ: ಆದಿ

ಆನಂದಾ ಪ್ರಭುದೇವಾ ನಿತ್ಯ ಆನಂದದಲ್ಲಿ ಸಲಹುವನೆ ||ಪಲ್ಲ||

ಅನುಪಮ ಭಸಿತಕಾಯ ದಿನಕರಕೋಟಿ ಪ್ರಕಾಶ ಶೋಭಾ
ಜನನುತ ವಂದಿತ ದೇವಾ ಜಗಭರಿತ ನಿರಂಜನ
ಘನಹರುಷ ದಯಾಲನೆ ನನ್ನಯ್ಯನೆ ||೧||

ಪರಮಪಾವನ ಸ್ವರೂಪ ನೀನೆ ನಿರುತಮಪ್ಪ ಸುಖದಾಯಕನೆ
ವರಮೂರ್ತಿ ಅಲ್ಲಯ್ಯ ಸಾಂಬಲೋಕದ ಅರಸ
ಗುರುವೇ ನೀ ಮಹಾದೇವನೆ ನನ್ನಯ್ಯನೆ ||೨||

ಅಗಣಿತ ಆದಿಮಹಿಮ ನೀನೆ ಸುಗುಣ ಮೋಹನ ಅಘಹರನೆ
ಮಗಿಯ ನರೇಂದ್ರನ ಸಲಹು ಮೂರುಲೋಕದ ಕರ್ತೃ
ಬಗೆಯನರಿತು ರಕ್ಷಿಸಯ್ಯ ನನ್ನಯ್ಯನೆ ||೩||

೭

ರಾಗ: ಮಲ್ಹಾರ, ಝಂಪತಾಳ

ನೀ ಮುನಿದರೇನಾದೀತು ಗುರುರಾಯ
ನೀ ಒಲಿದರೇನಾಗದು ಸ್ವಾಮಿ ||ಪಲ್ಲ||

ಚವರ್‍ಯಾ ಅಂಸಿಲಕ್ಷ ಯೋನಿಯೊಳು ತೊಳಲಿ ಬಳಲಿ
ಭವಭವದಿ ಜನಿಯಿಸಿ ನೊಂದೆ ಬೆಂದೆ

ಸವಿಸುಖವನುಂಡು ಅನುಭವಿಸಿ ದುಃಖವೆಂಬ
ಅವಿಚಾರಗುಣಗಳನು ಬಿಡಿಸಯ್ಯ ಪ್ರಭುವೆ ||೧||

ಹೊಲ್ಲದ ಸಂಸಾರದೊಳು ಹೊಕ್ಕು ಕದನಗಳು
ನಿಲ್ಲವು ದಿನದಿನಕೆ ನಗೆಗೇಡು
ತಲ್ಲಣಿಸಿತೀ ದೇಹ ತಾಳಲಾರದು ಪ್ರಾಣ
ಅಲ್ಲಮ ಪ್ರಭುರಾಯ ಕಾಯುವುದೆಮ್ಮ ||೨||

೨

ರಾಗ: ತೆಲುಗು ಕಾಂಬೋದಿ, ತಾಳ: ಆದಿ

ತಪ್ಪ ಕ್ಷಮೆಯ ಮಾಡು ಕರುಣಿ ಅಲ್ಲಯ್ಯ
ಒಪ್ಪುಳ್ಳ ಭಕ್ತರ ಸಲಹು ಬಲ್ಲಯ್ಯ ||ಪಲ್ಲ||

ಮಾಯಾಕೋಳಾಹಳ ದಯಮಾಡಯ್ಯ
ಕಾಯವೆಂಬ ಕರಡಿಗೆಯಲ್ಲಿ ನಿಂದು ನೋಡಯ್ಯ ||೧||

ಚರಣ ಕಮಲದಲಿ ಎನ್ನ ಮನವನಿಡಿಸಯ್ಯಾ
ಕರುಣದಿಂದ ಮರಣ ಸಮಯಕೆ ಅರುಹ ಮಾಡಯ್ಯಾ ||೨||

ಜಗದೊಳಗೆ ನಿಮ್ಮ ಕೀರ್ತಿ ಸ್ಥಿರವಿದಯ್ಯ
ಮಗೆಯ ನರೇಂದ್ರಗೆ ಕೃಪೆಯ ತೋರಯ್ಯಾ ||೩||

೩

ರಾಗ: ತೆಲಗ ಕಾಂಬೋದಿ, ಆದಿತಾಳ

ಯಾಕಯ್ಯ ಪ್ರಭುರಾಯ ಎನ್ನಮೇಲೆ ನಿಮ್ಮ ದಯವಿರಲಿ
ಸಾಕು ಸಾಕೆಂದರೆ ಸವಿಯ ಹೊಲ್ಲದು ಜನ್ಮ
ಬೇಕೆಂದು ಶ್ರೀ ಪಾದ ಹಾರೈಸಿದೆ ||ಪಲ್ಲ||

ಭವಸಾಗರದೊಳು ಮಿಂದು ಮುಳುಗಿ ತಪ್ಪದೆ
ಯುವತಿಯರೊಳು ಕೂಡಿ ಸವಿಮಾತುಗಳಾಡಿ
ನವೆದು ನರಕದೊಳು ಮುಳುಗಿರೆನು ||೧||

ತ್ರಿಭುವನದೊಳು ಚರಿಸಿ ವೈಭವದೊಳು ಮೆರೆದು
ಶುಭಧ್ಯಾನಗಳ ಬಿಟ್ಟು ಸದ್ಬುದ್ಧಿಯಿಲ್ಲದೆ ಕೆಟ್ಟು
ಮೊಬ್ಬೆಯಿಂದ ಜಗದೊಳು ತಿರುಗಿದೆನು ||೨||

ಜಗದೊಳು ನಿಮ್ಮ ದಯವು ಅಗಣಿತ ಮಹಿಮವು
ಮಗೆಯ ನರೇಂದ್ರಗೆ ಬಗೆಬಗೆಯಿಂದ ಬೇಗ
ಸುಗುಣ ಮೋಹನ್ನನೇ ಕೃಪೆಯಿಟ್ಟು ಸಲಹು ||೩||

೪

ರಾಗ: ತೆಲಗ ಕಾಂಬೋದಿ, ತಾಳ: ಆದಿ

ಭಾಳಲೋಚನ ಎಮ್ಮ ರಕ್ಷಿಸಯ್ಯ ಕರುಣದಿಂದಲಿ
ಕೋಳಾಹಳಾ ಮಾಯಾಮದಮರ್ದನ ಎಮ್ಮ ರಕ್ಷಿಸಯ್ಯಾ ||ಪಲ್ಲ||

ಮುದ್ದು ಮುಖದ ಮೊಗ್ಗೆ ಪ್ರಭು ಅಲ್ಲಮದೇವರಾಯನೆ
ಸಿದ್ಧ ಸಾಧಕರಿಗೆ ಶ್ರೇಷ್ಠವಾದ ಗುರುವೆ ಎಮ್ಮ ರಕ್ಷಿಸಯ್ಯ ||೧||

ಮರ್ತ್ಯಲೋಕಕೆ ನೀವು ಅರ್ತಿಯಿಂದಲಿ ಇಳಿದು ಬಂದು
ಕರ್ತೃ ಶಿವನ ಸ್ವರೂಪವಾದೆ ಎಮ್ಮ ರಕ್ಷಿಸಯ್ಯ ||೨||

ಧರೆಯೊಳಗೆ ತ್ರಿದಳದಲ್ಲಿ ವಾಸವಾಗಿ
ನರೇಂದ್ರ ಮಗೆಯಗೆ ಕೃಪೆಯದೋರಿ ಎಮ್ಮ ರಕ್ಷಿಸಯ್ಯ ||೩||

೫

ರಾಗ: ಕಲ್ಯಾಣ, ತಾಳ: ಝುಂಪಾ

ಎನ್ನ ಕರುಣಿಸು ಗುರುವೆ ಪನ್ನಂಗಧರ ಮೊಗ್ಗೆ
ಚನ್ನ ಪ್ರಭುರಾಯ ರನ್ನ ||ಪಲ್ಲ||

ಭಾಷೆಗೆ ತಪ್ಪುವನಲ್ಲ ಲೇಸುಗಾರಿಕೆಯ ಬಲ್ಲ
ದ್ವೇಷ ಲವಲೇಶವಿಲ್ಲ
ಮೋಸ ಮೂರುತಿಯಲ್ಲ ಸಾಹಸದಲಿ ಬಹುಮಲ್ಲ
ರೋಷ ಮತ್ತಿಲ್ಲ ಇಲ್ಲ ಗುರುವೇ ||೧||

ಮದನ ಮರ್ಧನ ಧೀರ ಚದುರ ಕಲಾವೀರ
ಹೃದಯ ನಿರ್ಮಳ ವಿಸ್ತಾರ
ವದನ ಕಮಲಕೆ ಮಾರ ವಿದಿತ ವಿಕ್ರಮ ಶೂರ
ಮಧುರಾಮೃತ ವಾಕ್ಯಸಾರ ಗುರುವೇ ||೨||

ಗುರುವೆ ಪರಿಭ್ರುತಲೀಲ ಕರುಣಿ ಅಲ್ಲಯ್ಯ ಲೋಲ
ಚರಣ ಕಮಲಕೆ ನಿಮ್ಮ ಬಾಲ
ನರೇಂದ್ರ ಮಗಿಯನ ಸೀಲ ವರವಿತ್ತು ಸಲಹುವ ಬಲ್ಲ
ಉರಗ ಭೂಷಣ ಚೆನ್ನ ಪ್ರತಿಪಾಲ ಗುರುವೆ ||೩||

## ಪ್ರಾರ್ಥನಾ ರೂಪದ ಸ್ವರವಚನಗಳು

೧

ರಾಗ: ಭೈರವಿ, ಅಡತಾಳ

ಯಾತಕ್ಕೆನ್ನೊಳು ನಿಮ್ಮ ಗೆಲುವಯ್ಯಾ
ಜಗನ್ನಾಥ ಪ್ರಭುವೆ ನೀ ಸಲಹುವಯ್ಯ ||ಪಲ್ಲ||

ಶರಣರ ಮನೆಯ ತೊತ್ತೆನಿಸಯ್ಯಾ ನಿಮ್ಮ
ಪರಮದಯವುಳ್ಳವನೆನಿಸಯ್ಯ
ದುರಿತದೋಷಂಗಳ ಪರಿಹರಿಸಯ್ಯ ನಿಮ್ಮ
ಚರಣಕಮಲದಲಿ ಮನವಿರಿಸಯ್ಯ ||೧||

ಅಪರಾಧಿ ಬಹುಕಾಲ ನೋಡಯ್ಯಾ ಇಂಥ
ಕುಪಿತ ಗುಣಂಗಳ ಬಿಡಿಸಯ್ಯ
ಶ್ವಪಚ ಗುಣಂಗಳ ಕೆಡಿಸಯ್ಯ ನಿಮ್ಮ
ಕೃಪೆಯಿಟ್ಟು ಶುನಕನ ರೂಢಿಸಯ್ಯ ||೨||

ಅಗಣಿತ ದುಃಖದಿ ನೊಂದೆನಯ್ಯ ಬಹು
ಜಗದೊಳು ಚರಿಸಿ ನಾ ಬಂದೆನಯ್ಯ
ಮಗೆಯ ನರೇಂದ್ರಗೆ ಕೃಪೆ ಮಾಡಿದಯ್ಯ ಇಂತು
ಬಗೆಯಿಂ ತ್ರಿದಳದಲಿ ನಿಂದೆಯಯ್ಯ ||೩||

ಹಿಂದಾದ ಕಥನವನು ಮುಂದಾಗಗೊಡಬೇಡ
ಇಂದುಧರ ಕರತ್ರಿಶೂಲಿ
ಅಂದವಾಗಿ ಕರುಣದಿ ಮಗಿಯ ನರೇಂದ್ರನ
ಕಂದ ಕರುಸಹವಾಗಿ ಸಲಹಯ್ಯ ಗುರುವೆ ||೩||

೮

ರಾಗ: ಕನ್ನಡ ಕಾಂಬೋದಿ, ಏಕತಾಳ

ಮುದ್ದು ಮುಖದ ಮಗಿಯ ಅಲ್ಲಮ ಆದಿ ಪ್ರಭುವೆ
ಸಿಧ್ಧವಾಗಿ ಅವನಿಗೆ ಬೇಗ ಬಂದೆ ಪ್ರಭುವೆ ||ಪಲ್ಲ||

ಕರುಣಿ ಸುಜ್ಞಾನಿ-ನಿರಹಂಕಾರಗೊಲಿದೆ ಪ್ರಭುವೆ
ಭರದಿ ಬನವಾಸಿಗೆ ಬಂದು ನಿಂದೆ ಪ್ರಭುವೆ
ವರಮಾಯೆಯ ಸೋಲಿಸಿ ಮುಂದಕ್ಕೆ ತೆರಳಿ ಪ್ರಭುವೆ
ಕರುಣವಿಟ್ಟೆ ಗೊಗ್ಗಿದೇವಗೆ ನೀನು ಪ್ರಭುವೆ ||೧||

ಅಲ್ಲಿಂದ ನೀನು ಸೊನ್ನಲಪುರಕೆ ಬಂದೆ ಪ್ರಭುವೆ
ಬಲ್ಲಿದ ಸಿದ್ಧರಾಮನ ಗರ್ವ ಕೆಡಿಸಿ ಪ್ರಭುವೆ
ಕಲ್ಯಾಣ ಹೊಕ್ಕು ಪ್ರಮಥರ ಕೂಡ ಮೆರೆದೆ ಪ್ರಭುವೆ
ಸುಲಭ ಬಸವೇಶಂಗೆ ಕೃಪೆಯಿತ್ತೆ ಪ್ರಭುವೆ ||೨||

ಧರೆಗೆ ತ್ರಿದಳವಾದ ಪುರದಿ ನಿಂದೆ ಪ್ರಭುವೆ
ಪರಸಿ ಪನ್ನಾರು ದೇಶ ಬಂದಿತು ಪ್ರಭುವೆ
ನರೇಂದ್ರ ಮಗಿಯಗೆ ದಯದಿ ಸಲಹು ಪ್ರಭುವೆ
ದುರಿತದೋಷಂಗಳ ಪರಿಹರಿಸು ಪ್ರಭುವೆ ||೩||

೯

ರಾಗ: ಸಕಲಾಭರಣ, ಏಕತಾಳ

ಅಲ್ಲಮ ಪ್ರಭು ಯೋಗೀಂದ್ರ ವಂದಿತ ನಾಗನರೇಂದ್ರ
ಸುರೇಂದ್ರ ||ಪಲ್ಲ||

ಮೂರು ಲೋಕದ ತಾಯಿ-ತಂದೆ ನೀನು
ಮೂರು ಪದಾರ್ಥದೊಳಗಾದೆ ನಾನು

ಮೂರು ಪುರವ ಕೆಡಿಸಿದಾತ ನೀನು
ಮೂರು ಲೋಕದೊಳು ಚರಿಸಿದೆ ನಾನು ||೧||

ಅಷ್ಟಕರ್ಮವ ಕೆಡಿಸಿದೆ ನೀನು
ಅಷ್ಟಮದದಿ ಬಹು ನೊಂದೆನು ನಾನು
ಅಷ್ಟಗುಣ ಮಂಡಿತ ನೀನು
ಕಷ್ಟಬಟ್ಟೆನು ಬಹುಕಾಲ ನಾನು ||೨||

ಎನ್ನ ಕಷ್ಟವ ನಿವಾರಿಸು ದಾತಾ
ಚನ್ನಪಟ್ಟದ ಅಲ್ಲಮನಾಥಾ
ಹೊನ್ನ ತ್ರಿದಳ ಪುರೇಶ ಪ್ರಖ್ಯಾತಾ
ಚನ್ನನರೇಂದ್ರ ಮಗಿಯನ ಮಾತಾಪಿತಾ ||೩||

೧೦

ರಾಗ: ಸಾಳಂಗ, ತಾಳ: ಆದಿ

ಅಲ್ಲಮಾ ಅಲ್ಲಮಾ ಶ್ರೀ ಪ್ರಭು ಅಲ್ಲಮಾ ||ಪಲ್ಲ||

ಎನ್ನಯ ಪ್ರಭುರಾಯ ಎನ್ನ ಮೇಲೆ ನಿಮ್ಮ ದಯವು
ಭಾನುಕೋಟಿ ತೇಜಾ ನೀನು ಪ್ರಕಾಶನೆ ||೧||

ಬಲುಕಾಲ ಬಳಲಿದೆ ಹಲವು ದಿನಗಳು ನಾನು
ಚಲುವ ದೇವರದೇವ ಸಲಹಯ್ಯ ಪ್ರಭುರಾಯ ||೨||

ಧರೆಗೆ ಮಿಗಿಲು ಆದ ಪುರತ್ರಿದಳದಲ್ಲಿ ವಾಸ
ನರೇಂದ್ರ ಮಗಿಯಗೆ ನೀನು ಕರುಣದಿ ಸಲಹಯ್ಯ ||೩||

೧೧

ರಾಗ: ಮೋಹನ, ಭೈರವಿ, ಅಡತಾಳ

ನಮೋ ನಮೋ ನಮೋ ಪ್ರಭುವೆ
ಎಮ್ಮಯ ಪಾಪ ಕರ್ಮವ ಪರಿಹರಿಸು ||ಪಲ್ಲ||

ನಿರಾಲಂಬ ನಿರ್ವಯಲನೇ
ನಿರುಪಮ ನಿತ್ಯ ನಿರಂಜನ ನಿರ್ಭಯನೆ
ಪರಮ ಪವಿತ್ರನೆ ಕರುಣಿ ದಯಾಲನೆ
ಪರಮಮೂರ್ತಿ ಅಲ್ಲಯ್ಯ ಪರುಷದ ಖಣಿಯೆ ||೧||

ಅದೃಶ್ಯ ಚನ್ನಯ್ಯನೆ ಮದನಭಂಗ
ಚಿದ್ರೂಪ ಚನ್ನಯ್ಯನೆ
ಚಿದ್ವಿಲಾಸಾನಂದ ಭದ್ರ ವಂದಿತದೇವ
ಮದ್ಗುರು ಮಮದೇವ ಚಿದಾನಂದ ಗುರುವೆ ||೨||

ಜಗದ ವಲ್ಲಭ ಧೀರನೆ ಜಂಗಮಲಿಂಗ
ಅಗಣಿತ ಮಹಿಮನೆ ಮಗಿಯ ನರೇಂದ್ರಗೆ
ಸುಗುಣ ಕೃಪೆಯನಿತ್ತು
ಅಘ ಹರಿವಂತೆ ಎಮ್ಮನು ರಕ್ಷಿಸಯ್ಯ ||೩||

೧೨

ರಾಗ: ವರಾಳಿ, ಆದಿತಾಳ

ಇಷ್ಟು ಸಾಕಯ್ಯ ನಮಗಿಷ್ಟು ಸಾಕಯ್ಯ
ದುಷ್ಟ ಕಾಲದಲ್ಲಿ ಬಹಳ ಕಷ್ಟ ಪಡಲಾರೆ ಗುರುರಾಯ ||ಪಲ್ಲ||

ಸಂಸಾರವೆಂಬ ಶೃಂಖಲೆ ಕಾಲಿಗೆ
ಸಂಶಯವಿಲ್ಲದೆ ಬಿದ್ದಿತಲ್ಲಾ
ಕಾಸಿಗೆ ಸರಿಯಾಯಿತು ಜನ್ಮ
ಬೇಸರದಿಂದ ಬದುಕುವುದೇನು ||೧||

ತನುವಿನೊಳು ತರಹರಿಸುತ
ವನಿತೆಯೊಳು ಒನೆ ಒನೆದು ಬಲು
ಬಿನುಗು ಗುಣ ಬಿಡಲಿಲ್ಲ ಬೇಗ
ಮನಸಿಗೆ ಬಾರದ ಮನೆಯೇನು ||೨||

ಧರೆಯೊಳು ಪುರ ತ್ರಿದಳವಾಸ
ಪರಮ ಪ್ರಭುವೆ ಗುರುತಿಗೆ ಲೇಸು

ನರೇಂದ್ರ ಮಗಿಯಗೆ ಮತಿ ವಿಶೇಷ
ಕರುಣವಿಟ್ಟು, ಸಲಹು ಜಗದೀಶ ||೩||

೧೩

ರಾಗ: ಮಲ್ಹಾರ, ಆದಿತಾಳ

ಶರಣು ಶರಣು ಪ್ರಭುರಾಯಂಗೆ ನಿರ್ಮಾಯಂಗೆ
ದುರಿತವ ಪರಿಹರಿಸಿದಂಗೆ ||ಪಲ್ಲ||

ಆದಿಯನಾದಿಯ ರೂಪಂಗೆ ನಿರ್ಲೇಪಂಗೆ ಪರ-
ವಾದಿಯ ಮಸ್ತಕ ಶೂಲಂಗೆ ||೧||

ಪರಮ ಕರುಣ ದಯಾಲಂಗೆ ಕೃಪಾಲಂಗೆ
.ನಿರುತ ಧರತ್ರಿಶೂಲಂಗೆ ||೨||

ಅಗಣಿತ ಅನುಪಮ ಸ್ವಾಮಿಗೆ ಭರ್ಗೋಪದೇಶಂಗೆ
ಮಗಿಯ ನರೇಂದ್ರಗೆ ಕೃಪೆಯಿತ್ತಂಗೆ ||೩||

೧೪

ರಾಗ: ಸಕಲಾಭರಣ, ಆದಿತಾಳ

ಅಂತ್ಯಕಾಲ ಸಮಯಕ್ಕೆ ಆರೂ ಇಲ್ಲೊ ಪ್ರಭುರಾಯ ನಿ-
ರಂತರಕಾಲ ಸಲಹಲ್ಕೆ ನೀನಲ್ಲದೆ ಮತ್ತೆ ||ಪಲ್ಲ||

ಮನೆಯಾರು ಮಕ್ಕಳಾರು
ಅನುವಾದ ಮಡದಿಯಾರು
ಘನಮಹಿಮ ನೀನಲ್ಲದೆ
ತನುವು ಸಂಗಡ ಬರಲಿಲ್ಲಯ್ಯ ||೧||

ತಂದೆಯಾರು, ತಾಯಿಯಾರು
ಬಂಧು-ಬಳಗದವರ್ಯಾರು
ಕಂದುಗೊರಳ ನೀನಲ್ಲದೆ
ಮುಂದೆ ಬಾಹುವರ್ಯಾರಯ್ಯ ||೨||

ಜಗವ್ಯಾರು ಜನರ್‍ಯಾರು
ಭಾಗ್ಯವ್ಯಾರು ಬದುಕ್ಯಾರು
ಮಗಿಯ ನರೇಂದ್ರಗೆ
ಸುಗುಣ ನೀನಲ್ಲದೆ ಮತ್ತೆ ||೩||

೧೬

ರಾಗ: ಆಹೇರಿ, ಆದಿತಾಳ

ದೇವಾಧಿದೇವ ಮಹಾದೇವ ಅಲ್ಲಯ್ಯ
ಭವ ಹರಿವಂತೆ ದಯದಿ ರಕ್ಷಿಸಯ್ಯ ||ಪಲ್ಲ||

ಉರಗಭೂಷಣನೆ, ವೃಷಭವಾಹನನೆ
ಕರದಲ್ಲಿ ಕಪಾಲ ಪಿಡಿದಿದ್ದ ಧೀರನೆ
ಶಿರದಲ್ಲಿ ಜಟೆಗಳ ಧರಿಸಿದ ದೇವನೆ
ಪರಮಾಂಗದಲ್ಲಿ ಧೂಳಿ ಸುಲೇಪನೆ ||೧||

ಮನ್ಮಥಮರ್ದನ ಮಸಣದಿ ನೆಲೆವಾಸ
ಉನ್ನತವಾದ ಶ್ರೀಗಿರಿ ಕೈಲಾಸ
ಚನ್ನಾಗಿ ಭಕ್ತರ ಸಲಹು ಸರ್ವೇಶ
ರನ್ನನಹುದು ದಶಭುಜ ಬಲೇಶ ||೨||

ತ್ರಿಶೂಲಿ ಪಿನಾಕಿ ಪಂಚವದನರೂಪ
ರಾಶಿದೈವದ ಗಂಡ ಪ್ರಭುಲಿಂಗ ಭೂಪ
ಲೇಸ ನರೇಂದ್ರ ಮಗಿಯಗೆ ದಯಪಾಲಿಪ
ಬೀಸಿ ಬಡಿದಯ್ಯ ನೀನು ಬಲು ತ್ರಯ ತಾಪ ||೩||

೧೭

ರಾಗ: ಕಲ್ಯಾಣ ತಾಕಮಾನ, ಅಡತಾಳ

ಸಕಲರಿಗೆಲ್ಲಿಯದು ಪ್ರಭುವಿನ ಸುಖ
ಅಕಳಂಕಾದಿಯನಾದಿ ಜಂಗಮಲಿಂಗ ||ಪಲ್ಲ||

ಭಕ್ತವತ್ಸಲದೇವ ಭವರೋಗವಿರಹಿತನೆ
ಮುಕ್ತಿಮಾರ್ಗಕೆ ಮುಖ್ಯ ಮೊಗ್ಗೆ ಅಲ್ಲಮ ಪ್ರಭುನಾಥ ||೧||

ಅಂಗಜ ಮರ್ದನ ಅನುಪಮ ಭಸಿತಾಂಗ
ಸಂಗ ಸಾಧುಜನರ ಮನೋರಥ ಸಿದ್ಧಾಂತ ||೨||

ಪರಮ ಪಾವನ ರೂಪ ಪಾಲಿಸಯ್ಯ ವರಗಳ
ನರೇಂದ್ರ ಮಗಿಯಗೆ ಕರುಣೆ ದಯವಿಟ್ಟು ಸಲಹಯ್ಯ ||೩||

೧೭

ರಾಗ: ಸಾಳಂಗ, ಜಯಮಂಗಳತಾಳ

'ಓಂ ನಮೋ ನಮಃ ಶಿವಾಯ' ಎಂಬ ಪ್ರಣಮ ಕಡು ಲೇಸು||ಪಲ್ಲ||

ಪಂಥವುಳ್ಳ ಪ್ರಭುರಾಯ ಪರಿಣಾಮಿ ಪಾಲಿಸಯ್ಯ
ಚಿಂತೆಯನು ದೂರಮಾಡು ಅಲ್ಲಯ್ಯನೆ ಅವಸರಕೆ ||೧||

ಕಡು ದುರಿತವ ಬಿಡಿಸಯ್ಯ ವರವಿತ್ತು
ದೃಢವುಳ್ಳ ಗುರುರಾಯ ಬಿಡದೆ ಎಮ್ಮ ಸಲಹಯ್ಯ ||೨||

ಜಗದೊಳು ನಿಮ್ಮದಯ ಮಿಗಿಲಾಗಿ ನಡಸಯ್ಯ
ಮಗಿಯ ನರೇಂದ್ರನ ಹಗೆಗಳ ನೀ ಸಂಹರಿಸು ||೩||

೧೮

ರಾಗ: ಮಲ್ಹಾರ, ಬ್ರಹ್ಮತಾಳ

ಅಲ್ಲಮ ಮಗಿಯ ಪ್ರಭುರಾಯಾ
ಬಂದು ಎಮಗೆ ಮಾಡು ದಯಾ ||ಪಲ್ಲ||

ಸಾಸಿರನಾಮದ ಒಡೆಯನೆ "[ನೀ]"
ಲೇಸಾಗಿ ಬೇಗದಿ ಪಾಲಿಸು "[ನೀ]"
ಕುಶಲ ಉರಗಭೂಷಣನೆ "[ನೀ]"
ವಿಷವ ಕಂಠದಿ ಧರಿಸಿದೆ "[ನೀ]" ||೧||

ಅದ್ವೈತ ಅದೃಶ್ಯ ಅಗಣಿತ
ಚಿದ್ರೂಪ ಚಿನ್ಮಯ ಜಗದ್ಹಿತಾ

೧-೧ x(ಮೂ)

ಒದ್ಧಾಗಿ ಸಲಹು ಮಮ ದಾತಾ
ಮದ್ಗುರು ದೋಷಾದಿ ವಿರಹಿತ ||೨||

ಪರಮ ಪುರುಷರ ರೂಪ ದಯಾಪಾಲ
ಕರದಿ ಪಿಡಿದೆ ತ್ರಿಶೂಲ
ನರೇಂದ್ರ ಮಗಿಯಗೆ ಬಹುಕಾಲ
ಕರುಣವಿತ್ತೆ ನೀ ಘನಲೋಲ ||೩||

೧೯

ರಾಗ: ಕನ್ನಡ ಕಾಂಬೋದಿ, ಆದಿತಾಳ

ತಾರಿಸಯ್ಯ ತವಕದಿ ಎನ್ನ ದುರಿತವ ಮುನ್ನ
ಮುದ್ದು ಮೋಹನ್ನ ರತ್ನದ ಚಿನ್ನ ಪ್ರಭುರಾಯ ರನ್ನ ||ಪಲ್ಲ||

ವಾರಿಜಮುಖದ ಅಲ್ಲಮಾ
ಘೋರ ಪಾಪದೂರ ಮಾಡಿದ ರಾಮ
ಮೂರು ಪುರವ ಕೆಡಿಸಿದ ಭೀಮ ದಹನ ಕಾಮ
ಧರಸೋಮ ನಿಸ್ಸೀಮ ಭಕ್ತರಿಗೆ ಪ್ರೇಮ ||೧||

ದಯವಿಡು ಮದನಮರ್ದನ ಧೀರ
ಪ್ರಿಯದಿಂದ ಎನ್ನ ಸಲಹು ವೀರ
ಭಯಗಳ ಬೇಗ ಮಾಡು ದೂರ ವೈರಿಸಂಹಾರ
ಮಾಡಯ್ಯ ಠಾರ, ಶಿರಸುಹಾರ ಸದ್ಗುಣ ಗಂಭೀರ ||೨||

ಭಾಷೆಗೆ ತಪ್ಪುವಾತ ನೀನಲ್ಲ
ಶಿಶುವು ನರೇಂದ್ರನ ಸೊಲ್ಲ
ಲೇಸು, ಮತಿಗೆ ವರವಿತ್ತೆ, ಎಲ್ಲ ಚಿದ್ರೂಪಮಲ್ಲ
ಪರಮ[ಬ]ಲ್ಲ, ಆಲಸ್ಯವಿಲ್ಲ, ನಿರ್ಧಾರಕ್ಕೆಲ್ಲ ||೩||

೨೦

ರಾಗ: ಶ್ರೀರಾಗ, ಆದಿತಾಳ

ಅಲ್ಲಮಾಪ್ರಭು ನಿಮ್ಮ ಪೊಗಳಲಳವಲ್ಲ ಜಗದೊಳಗೆ ||ಪಲ್ಲ||

ಸಾಸಿರನಾಮನೆ ಸದಾಶಿವದೇವನೆ
ಈಶಾ ಸರ್ವೇಶಾ ಜಗದೀಶ ||೧||

ಗಂಡರಗಂಡನೆ ಗರುಡವಾಹನನ ಕೈ
ದಂಡಾಯಮಾನ ನೀನಹುದು ಆದಿ ಜಂಗಮಲಿಂಗ ||೨||

ಅಗಣಿತ ಮಹಿಮನೆ
ಮಗಿಯ ನರೇಂದ್ರನ ಸಲಹುವಯ್ಯ ||೩||

೨೧

ರಾಗ: ಭೈರವಿ

ಅಲ್ಲಮ ಪ್ರಭುರಾಯ ಆರಿಗು ತಿಳಿಯದು ನಿಮ್ಮ
ಬಲ್ಲಿತ್ತಾದ ಮಹಿಮೆ, ಮಹಿಯೊಳಗೆ ಮಹಾದೇವ ||ಪಲ್ಲ||

ರಾಜಾಧಿರಾಜನೆ ರಾಜತೇಜೋನಿಧಿಯ
ರಾಜರಾಜರ ಕೈವಂದನೆಯ[೧][ಕೊಳುವಾತ][೧]
ರಜತಾದ್ರಿ ಪರ್ವತಕ್ಕೊಡೆಯನಾಗಿ [೨][ಅಲ್ಲಿಂದ][೨]
ಮೂಜಗವ ಚರಿಸಿ ಭಕ್ತರ ಸಲಹುವಾತ ||೧||

ಎನ್ನದೋಷಂಗಳ ಏನಹೇಳಲಿ ನಾನು
ಭಿನ್ನವಿಲ್ಲದೆ ನೀನು ಪರಿಹರಿಸು ಗುರುರಾಯ
ಬಿನ್ನಹ[೨][ವ][೨]ಕೇಳಯ್ಯ ಬಿರುದಂಕ ಬಲ ಭೀಮನೆ
ಚೆನ್ನಾಗಿ ರಕ್ಷಿಸು ಚಲುವ ಚೆನ್ನಯ್ಯನೆ ||೨||

ಜಗದೊಳುಜಗಭರಿತ ಜಂಗಮಲಿಂಗವೆ
ಅಘಹರ ಮಾಡಯ್ಯ ಅಗಣಿತ ಮಹಿಮನೆ
ಮಗಿಯ ನರೇಂದ್ರನ ಬಗೆಬಗೆಯಿಂಡಲಿ ನೀನು
ಸುಗುಣ ಮೋಹನ್ನನೆ ಕೃಪೆಯಿಟ್ಟು ಸಲಹುವಯ್ಯ ||೩||

---

೧-೧ ಕೊಳಾಬಲ್ಲಿ (ಮೂ); ೨-೨ x (ಮೂ)

೨೨

ರಾಗ: ವರಾಳಿ, ತುರಂಗಲೀಲೆ ತಾಳ

ಅಲ್ಲಯ್ಯ ಅದ್ವೈತ ಜ್ಞಾನದನಿಧಿಯೆ
ಸೊಲ್ಲು ಸೊಲ್ಲಿಗೆ ನೀ ಮತಿಯ ಪಾಲಿಸು ||ಪಲ್ಲ||

ಸ್ವಾತಿಯ ಮಳೆಗೆ ಸಿಂಪಿಯ ಗರ್ಭದಿ
ಜಾತಿಯ ಮೌಕ್ತಿಕವು ಜನಿಸಿದಂತೆ
ಪ್ರೀತಿಲಿ ಜ್ಞಾನವು ವೆಗ್ಗಳವಾಗಿ ನೀ
ರೀತಿಯ ಪಾಲಿಸು ಬೇಗದಿ ಗುರುವೆ ||೧||

ಕರುಣವಿಟ್ಟು ನೀ ದುರಿತಸಂಹರ
ಭರದಿ ಮಾಡಯ್ಯ ಕೃಪಾಳು ದಯಾಳು
ಪರಮ ಪ್ರಭುವೆ ಮದನಭಸ್ಮಾಂಗಿ
ಬಿರುದ ವೆಗ್ಗಳವಾಗಿ ಪಾಲಿಸು ||೨||

ಲೇಸಾಗಿ ಧರೆಗೆ ಮಿಗಿಲು ತ್ರಿದಳ
ವಾಸಾಗಿ ನಿಂದೆಯ್ಯ ಅದೃಶ್ಯ ತಂದೆ
ಶಿಶು ನರೇಂದ್ರ ಮಗಿಯಗೆ ಮತಿಯ ||೩||

೨೩

ರಾಗ: ಪಾಡ್ಯ, ಆದಿತಾಳ

ಪ್ರಭುರಾಯ ಕೃಪೆಯ ಮಾಡೆನಗೆ
ನಿರ್ಮಾಯ ಕೃಪೆಯ ಮಾಡು ನನಗೆ ||ಪಲ್ಲ||

ದೇವ ಮಾಯಾಮದಭಂಗ ಸುಸಂಗ ಪರಮಾಂಗ
ಪ್ರಭುಲಿಂಗ ಕೃಪೆಯ ಮಾಡೆನಗೆ ||೧||

ದೇವ ಜಗದೊಲ್ಲಭ ಧೀರ ಅಘಹರ ಮುಕ್ತಿವರ
ಕರುಣಾಕರ ಕೃಪೆಯ ಮಾಡೆನಗೆ ||೨||

ದೇವ ನರೇಂದ್ರ ಮಗಿಯಗೆ ಸುರೇಂದ್ರ ಧರಣೇಂದ್ರ ವಂದಿತ
ಯೋಗೀಂದ್ರ ಕೃಪೆಯ ಮಾಡೆನಗೆ ||೩||

೨೪

ರಾಗ: ತೋಂಡಪರಾಣಿ, ತಾಳ: ಆದಿ

ಆರಿಗೆ ಆರಿಲ್ಲ ಗುರುವೆ, ಆಡಬಾರದು ಅಲ್ಲಯ್ಯನೆ
ಮಾರಹರ ನಿಮ್ಮ ಕರುಣ ತಪ್ಪಿ ನಾ ದೂರಿಸ್ತನಾದೆನು ಪ್ರಭುವೆ||ಪಲ್ಲ||

ಸದನದೊಳು ಬಲು ಕದನಗಳೆದ್ದವು
ಹೃದಯದೊಳಗೆ ಇವು ಶಲ್ಯಗಳಾದವು
ಗದಗದಿಸಿ ಮನ, ಚದುರತನ ಹೋಗಿ
ತದನಂತರದೊಳು ಬೆದರಿದೆ ಬೇಗ ||೧||

ಅರಗಿಳಿಯಂದದಿ ಕರಗಿದೆ ಪಂಜರದಿ
ಭರದಿಂದ ಮಾಡುವ ಗುರುತಿನ ಯುಕ್ತಿಯು
ತರಹರಿಸಿತು ಮನ ಕೊರೆಯಿತು ಜೀವನ
ಸಿರಿಪ್ರಾಯಗಳು ಸ್ಥಿರವೆನ್ನಬಹುದೆ? ||೨||

ಮಗೆಯ ನರೇಂದ್ರಗೆ ಹಗೆಗಳು ಹೆಚ್ಚಿರೆ
ಬಗೆಯಿಂದವರ[೧][ನೀ][೧]ತೊಲಗಿಸಿ ಬಿಡಯ್ಯ
ಮಗಮಗಿಸುವ ಮೃದು ಸೊಗಸಿಲಿ ಪೇಳಿದ
ಮಗುವಿನ ಸಲಹುವಯ್ಯ ಅಗಣಿತ ಮಹಿಮ ||೩||

೨೫

ರಾಗ: ತೆಲಗ ಕಾಂಬೋದಿ, ಆದಿತಾಳ

ಯಾತಕ್ಕೆ ಪುಟ್ಟಿಸಿದಯ್ಯ ಈ ಜನ್ಮವನು
ಧಾತುಗೆಟ್ಟು ಕೈ ಕಾಲು ಬಾತು ಸತ್ತಮೇಲೆ ಏನು ||ಪಲ್ಲ||

ಮಳೆಮಾರು ಇಲ್ಲದೆ ಬಿದ್ದಿತು ಬರ
ಹೊಳೆ ಕೆರೆ ಬಾವಿ ಹಳ್ಳದೊಳಗಿಲ್ಲನೀರ
ಕಳೆಹೋಗಿ ಮನುಜರ ಸುಡು ಸಂಸಾರ
ಬೆಳೆ ಬತ್ತವಿಲ್ಲದೆ ಧಾನ್ಯ ಬಲುದೂರ ||೧||

---

೧-೧ X(ಮೂ)

ಹಸುರಾಣಿ ಗೋಳಿ ಗೊರಜಿ ಅವು ಮುಷ್ಕವಿಲ್ಲ
ತೃಷೆಯಿಂದ ಬನ್ನಿ ಬೊಬ್ಬುಲಿ ಸೊಗಲಿ ಎಲ್ಲ
ಶಿಶುಗಳು ಮುಂತಾಗಿ ಸಲುಸಿದವಲ್ಲ
ಬಿಸಜಾಕ್ಷ ನಿಮ್ಮ ಕೃಪೆ ಎಳ್ಳಷ್ಟಿಲ್ಲ ||೨||

ನುಡಿಸಿದ ನುಡಿಯನು ಬೊಗಳಿದ ಹೀಗೆ
ಕಡುಕೃಪೆ ಮಾಡಿ ನೀನು ಪಾಲಿಸಯ್ಯ ಬೇಗ
ಒಡೆಯ ಅಲ್ಲಮಪ್ರಭು ಮಗಿಯ ನರೇಂದ್ರಗೆ
ಕೊಡು ಬೇಗ ವರಗಳ ಹೆರೆಹಿಂಗದ್ಹಾಂಗೆ ||೩||

೨೬

ರಾಗ: ಸಾಳಂಗ, ಆದಿತಾಳ

ತ್ರಾಹಿ ತೋಬಾ ತಪ್ಪೆನ್ನದು ಗುಹೇಶ್ವರಯ್ಯ
ಮೋಹಿನಿ ಮಮಕಾರನ ಮಗಳ ಸೋಲಿಸಿದಯ್ಯ ||ಪಲ್ಲ||

ಬಾಲತನದಿ ಜನ್ಮ ಷೋಡಶ ವರುಷ ಹೋಯಿತು
ಮೇಲೆ ಜವ್ವನವೇರಿ ವ್ಯಸನದ ಮದಕೆ ಒಯ್ಯಿತು
ಬಾಲೆಯರ ಸಂಗದಿಂದ ದೇಹ ಕರಗಿ ಬೇಯಿತು
ಕಾಲವ ಕಳೆವ ಸಮಯಕ್ಕೆ ರೂಪ ವೃದ್ಧವಾಯಿತು ||೧||

ಹುಟ್ಟು ಹೊಂದೆಂಬೆರಡರ ಕಾಟದೊಳಗಾದೆ
ಕೊಟ್ಟು ಕೊಂಬ ಸಂಸಾರದೊಳು ಬರಿದೆ ಮುಳುಗಿದೆ
ಘಟ್ಟಿ ಹಿಡಿಯದೆ ಮನವ ಚಂಚಲವಾಗಿ [ಬೆಳಿಸಿದೆ]
ಕಟ್ಟೆ ಕಡೆಯಲಿ ನಿಮ್ಮ ಪಾದಕೆ ತಲೆ ಕೆಳಗಾದೆ ||೨||

ಕರುಣದಿಂದ ರಕ್ಷಿಸೆನ್ನ ಕಾಮದಹನ
ನಿರುತವಾಗಿ ಮಗೆಯ ನರೇಂದ್ರಗೆ ಮುದ್ದು ಮೋಹನ್ನ
ಗುರುವೆ ಅಲ್ಲಮ ಪ್ರಭುರಾಯ ಕೇಳೆನ್ನ ಬಿನ್ನಹ ||೩||

೨೭

ರಾಗ: ಭೈರವಿ, ಆದಿತಾಳ

ನಿರಂಜನಸಿದ್ಧ ಗುರುನಾಥ ಬಲ್ಲಿದ ಎಮ್ಮೊಡೆಯನೆ ||ಪಲ್ಲ||

ಪ್ರಾಣನಾಥ ಪ್ರಭುರಾಯ
ಕಾಣದೆ ನಾ ನಿಲ್ಲಲಾರೆ ||೧||

ಆರೂಢ ಪರಬ್ರಹ್ಮ
ಅಲ್ಲಯ್ಯನೇ ದಯವಿಡು ||೨||

ನರೇಂದ್ರ ಮಗಿಯಗೆ
ಕರುಣದಿ ಸಲಹುವಯ್ಯ ||೩||

೨೮

ರಾಗ: ಭೈರವಿ, ಆದಿತಾಳ

ಪ್ರಭುರಾಯ ನಿಮ್ಮ ದಯ ಎಂದಿಗಾಗುದು ಸ್ವಾಮಿ
ಅಂದಿಗಾಗುವ ಕಾರ್ಯಂಗಳು ಇಂದಿಗಾಗಲಿ ||ಪಲ್ಲ||

ಮಂದಮತಿ ಬಿಡಿಸಯ್ಯ ಮೊಗ್ಗೆ ಅಲ್ಲಮ ನಮ್ಮ
ತಂದೆ ಶ್ರೀ ಪ್ರಭುಕೇಳು ಎನ್ನಬಿನ್ನಹ ||೧||

ಭಾವವಿಲ್ಲದೆ ಭಕ್ತಿಗಳ ಮಾಡಿದರೇನು, ಮನಕೆ
ಹೇವವಿಲ್ಲದ ಮನುಜ ಬಾಳಿದರೇನು ||೨||

ನರೇಂದ್ರ ಮಗಿಯನು ನಿನ್ನ ಭಜಿಸಿದನಲ್ಲ
ದುರಿತ ದೋಷಂಗಳ ಪರಿಹರಿಸಿದೆಯಲ್ಲ ||೩||

೨೯

ರಾಗ: ತೆಲಗ ಕಾಂಬೋದಿ, ಆದಿತಾಳ

ಮಾಯಿ ಉಪಾಯ ಮಾಡಿ ಕಾಯದಿಂದ ಮೋಹಿಸಿ
ಬಾಯಿ ಮುಚ್ಚಿ ಕೊಲ್ಲುತ್ತಿದೆ ಕಾಯ ಪ್ರಭುರಾಯನೆ ||ಪಲ್ಲ||

೧[ನನ್ನಿ ಇರದ]೧ ಬುದ್ಧಿಯಿಂದೆ ನಾನು
ಅನ್ಯರ ಆಶೆ ಪಿಡಿದು ನೋಡಿ
ಘನ ಘಾಸಿಯಾದೆನಯ್ಯ
ಕಾಯ ಪ್ರಭುರಾಯನೆ ||೧||

ಮಲಮೂರೆನ್ನ ಬಿಡಲಿಲ್ಲ
ಬಲೆಯೊಳು ಸಿಕ್ಕು ಹೋಗುತಿಹೆನು
ದಲ್ ಗೆಲದೆ ಕೆಟ್ಟೆನಯ್ಯ
ಕಾಯಾ ಪ್ರಭುರಾಯನೆ ||೨||

ಹಗೆಯೊಳು ಹಾಕಿ ಕೈದೆಗೆದಾಗ
ಮಗೆಯನರೇಂದ್ರನ ಭೋಗ
ನಗೆಗೀಡಾಗದ್ಹಾಗೆ ಮತ್ತೆ
ಕಾಯಾ ಪ್ರಭುರಾಯನೆ ||೩||

೩೦

ರಾಗ: ಕಲ್ಯಾಣ, ಆದಿತಾಳ

ಜ್ಞಾನಮೂರ್ತಿ ಸುಲಭ ರಾಯನೆ ನಿಮಗೆ
ದಾನವರು ಸರಿಯಾರು ಮರ್ತ್ಯದೊಳಗೆ ||ಪಲ್ಲ||

ದಕ್ಷನ ಶಿರವರಿದು ಮೇಕೆಯ ತಲೆಯಿತ್ತು
ರಕ್ಷಿಸಿ ಪ್ರಾಣ ಪಡೆದಯ್ಯ
ರಕ್ಷಿತ ಶಿಕ್ಷಿತ ಭಕ್ಷಿತ ತ್ರಿಗುಣೇಶ
ಮೋಕ್ಷಗಾಮಿ ನೀನಹುದಯ್ಯ ||೧||

ಕುಂಡದೊಳಗಿನ ಭದ್ರಕಾಳಿಯ ಕರವಿಡಿದು ಪ್ರ-
ಚಂಡನಡೆದ ವೀರೇಶ ಸಾಂಬಲೋಕಕೆ
ಕಂಡ ದೈತ್ಯರನು ಸೀಳಿ ಉದ್ದಂಡ ಶಾಪಕ್ಕೊಳಗಾಗಿ ಮಾ
ರ್ತಾಂಡ ವೀರೇಶ ನಡೆದಯ್ಯ ಮರ್ತ್ಯಲೋಕಕೆ ||೨||

೧-೧ ನನ್ನಿದ (ಮೂ)

ಜಗದ ಕಲ್ಯಾಣದ ಮಿಗಿಲಾದ ಪ್ರಮಥರಲ್ಲಿ
ಒಗೆದು ಮಡಿ ಮಾಡಿ ತೋರಿದೆ ಮಡಿವಾಳೇಶ
ಮಗೆಯ ನರೇಂದ್ರಗೆ ಅಗಣಿತ ದಯವಿಟ್ಟು
ಸುಗುಣ ಮೋಹನ್ನ ರಕ್ಷಿಸು ಸುಲಭರಾಯ ||೩||

೩೧

ರಾಗ: ಸಾರಂಗ, ತಾಳ: ಆದಿ

ಸದ್ಗುರು ಸಾಹೇಬಜಿ ತುಮ ಕರುಣಾಕರ ಕರದೇಣಾಜಿ ||ಪಲ್ಲ||

ಹಮ್‌ತೊ ಅಜ್ಞಾನಿ, ಸಾಹೇಬತೋ ಸುಜ್ಞಾನಿ
ನಿರಹಂಕಾರ ನಿರ್ಭಯ ನಿರ್ವಾಣಿ ||೧||

ಅಗಣಿತ ಮಹಿಮ ತುಮ ಸದ್ಗುಣ ಸಾಧುವ
ಮಗಿಯನರೇಂದ್ರಕೊ ಕೃಪಾಕರ ಅಲ್ಲಮ ||೨||

೩೨

ರಾಗ: ಕನ್ನಡ ಕಾಂಬೋದಿ, ತಾಳ: ಆದಿ

[೧][ಜ್ಞಾನ ದೇಡೊ ದೇಡೋ][೧]
ಪ್ರಭು ಸಾಹೇಬ ||ಪಲ್ಲ||

ಏಕ ಏಕದಿನ್ ಬಹುತಮಾಸ
ಲೋಕ ಲೋಕ ವಂದಿತದೇಖ ಅಲ್ಲಮೇಶ ಮೇರೆ ಸಾಹೇಬ ||೧||

ಭುವನಮೆ ತೇರೆ ಸತ್ಯ ಚಲಾಯಿಯೆ
ಜಬ್ ಮೇರೆ ನಜರಕೊ ಚರಣ ದಿಖಲಾವೆ ಮೇರೆ ಸಾಹೇಬ ||೨||

ಜಂಗಮಲಿಂಗ ಪ್ರಭುಲಿಂಗಕೀ ಚರಣ
ಭೃಂಗ ಮಗಿಯನರೇಂದ್ರಕೊ ಕರುಣ ಮೇರೆಸಾಹೇಬ ||೩||

---

೧-೧ ಗ್ನಾನ ದೀಜೊ ದೀಜೊ (ಮೂ)

೩೩

ರಾಗ: ಕಾನಡಾ, ತಾಳ: ಆದಿ

ಪ್ರಭುರಾಜ, ಬಿನಾ ದುಃಖ ಕೌನ ಹರೋರೆ
ಮಹಾದೇವ ಬಿನಾ ದುಃಖ ಕೌನ ಹರೋರೆ ||ಪಲ್ಲ||

ತೂಹಿ ತಾರೆ ತೂಹಿ ಮಾರೆ
ತುಝು ಬಿನ ದುಃಖ ಕೌನ ಹರೋರೆ ||೧||

ಭುಜಂಗಭೂಷಣ ಗಜಾಸುರಮರ್ದನ
ನಿಜರೂಪ ಮುಝು ದಿಖಲಾವೊ ||೨||

ಅಘಹರ ಮುಕ್ತಿವರ ಜಗದ ವಲ್ಲಭ ವೀರ
ಮಗಿಯ ನರೇಂದ್ರಕೋ ದೀಯ ಸನ್ಮತಿ ಸಾರೆ ||೩||

೩೪

ರಾಗ: ಪುಡ್ಯ, ಆದಿತಾಳ

ಪ್ರಭುನಾಮಾಚಿ ಭೋಪುಳ ಬಾಂಧಾವಿ
ಬಾಂಧಾವಿ ಪ್ರಭುನಾಮಾಚಿ ಭೋಪುಳ ಬಾಂಧಾವಿ ||ಪಲ್ಲ||

ಅರೆ ಹೊ ಭವಾಂಬುಧಿ
ಅಂಬುಧಿ ಉತರೂನಿ
ಕ್ಷಣಮಾತ್ರ ತಾರುನಿ ಜಾವಾನಿ ||೧||

ಅರೆ ಹೊ ಸಂಸಾರ ಬಹು ಖೋಡಿ
ಬಹು ಖೋಡಿ ಭವಬಂಧನ ತೋಡಿ
ಗುರುಪಾದ ಮನಜೋಡಿ ||೨||

ಅರೆ ಹೋ ಮಗೆಯ ನರೇಂದ್ರ
ನರೇಂದ್ರ ದಿನಕರ ಚಂದ್ರ
ಮೌಳಿದೇವ ರಕ್ಷಿಸು ||೩||

೩೫

ರಾಗ: ಭೈರವಿ, ತಾಳ: ಅಡತಾಳ

ಶರಣು ಶರಣಯ್ಯ ಶರಣು ಶರಣಯ್ಯ ಎನ್ನೊಡೆಯನೆ ||ಪಲ್ಲ||

ಶರಣು ಪ್ರಭುವೆ ನೀ ದುರಿತ ಸಂಹಾರ
ಕರುಣಸಾಗರ ಕಾಮದಹನ
ತಧಿಂ ನಕಡತಕಿಟಧಿಗಿಣ ಥೈ ||೧||

ಅಲ್ಲಮಪ್ರಭು ಬಯಲು ವಿರಕ್ತ
ಸೊಲ್ಲು ಸೊಲ್ಲಿಗೆ ಬಲುಗೆಲುವ ಕೊಡು
ತಧಿಂ ನಕಡ ತಕಿಟಧಿಗಿಣ ಥೈ ||೨||

ನರೇಂದ್ರ ಮಗಿಯಗೆ ಪರಮವರವಿತ್ತು
ಸರಸ ಹರುಷದಿ ಸಲಹು ಗುರುವೆ ನೀ
ತಧಿಂ ನಕಡತಕಿಟಧಿಗಿಣ ಥೈ ||೩||

೩೬

ರಾಗ: ಸಾರಂಗ, ತಾಳ: ಆದಿ

ನೌಬತ್ ಬಾಜೆ ಅಲ್ಲಮಪ್ರಭುಕಿ
ಝುಂಗಡ ಝಣಣಣಣ ||ಪಲ್ಲ||

ಢೋಲ ಥಮಾಮಾ ಗಿಡ ಬಿಡಬಾಜೆ
ಎಂತರ ಕಿತಿಯಂ ವಾಜೆ ಬಾಜೆ ||೧||

ಖಾಲ ನಗಾರಾ ಕರ್ಣನಫೇರಾ
ಸೀಂಗ ತುತೂರಾ ವಾಜೆ-ಬಾಜೆ ||೨||

ಮಗಿಯ ನರೇಂದ್ರಕು ಜ್ಞಾನದೀ ಜೊ
ಸಾರಂಗರಾಗ ಸುನಾವೆ ||೩||

# ಮಹಿಮಾ-ಸ್ತುತಿರೂಪದ ಸ್ವರವಚನಗಳು

೧

ರಾಗ: ಭೈರವಿ, ಆದಿತಾಳ

ನಂಬಿದೆನಯ್ಯ ಪ್ರಭುರಾಯನಾ ನಾನು ||ಪಲ್ಲ||

ಅಂಬರಧರಿಸಿ ನೀ ಆದಿ ಲಿಂಗವೆ ರಾಯಾ
ನಂಬುಳ್ಳ ಭಕ್ತರ ಸಲಹುವಂಥಾ ನಿಧಿಯೆ ||೧||

ಮಾಯಾಕೋಲಾಹಲ ಪರುಷದ ಖಣಿಯೆ
ಭಯವಿರಹಿತನೆ ನಿರಂಜನಮಣಿಯೆ ||೨||

ಜಗದವಲ್ಲಭ ಧೀರ ಅಜಹರಿ ಮನೋಹರ
ಮಗಿಯ ನರೇಂದ್ರನ ಸಲಹುವಂಥಾ ವೀರಾ ||೩||

೨

ರಾಗ: ಭೈರವಿ, ಆದಿತಾಳ

ನಿನ್ನ ಕಾಣದೆ ನಿಲ್ಲಲಾರೆ ಜಾಣ ಜಂಗಮ ಲಿಂಗವೆ ||ಪಲ್ಲ||

ಒಂದೊಂದು ಯುಗದಲ್ಲಿ ಹನ್ನೊಂದು ರೂಪವಧರಿಸಿ
ದಂದುಳ್ಳ ಭಕ್ತರ ಸಲಹುವಂಥ ಗುರುವೆ ನಿನ್ನ ||೧||

ತ್ರಿಪುರುವ ಕೆಡಿಸಿದಂಥಾ ಕಪ್ಪುಗೊರಳದೇವನೆ
ಒಪ್ಪುಳ್ಳ ತ್ರಿದಳಕ್ಕೆ ಒಡೆಯನಾದೆ ದೇವ ನಿನ್ನ ||೨||

ದಶಭುಜ ಪಂಚಮುಖ ನೊಸಲಲ್ಲಿ ತ್ರಿನೇತ್ರ
ಶಿಶು ಮಗೆಯ ನರೇಂದ್ರನ ಸಲಹುವಂಥಾ ಗುರುವೆ ನಿಮ್ಮ ||೩||

೩

ರಾಗ: ತೆಲಗ ಕಾಂಬೋದಿ, ಕರ್ನಾಟಕ ಆದಿತಾಳ

ಪ್ರಭು ದೊಡ್ಡವನಯ್ಯ ಏನ ಹೇಳಲಿ ನಿನ್ನ ಮಹಿಮೆಯ ||ಪಲ್ಲ||

ಧರಣಿಹೊತ್ತ ಶೇಷನೆರಡೆರಡು ಜಿಹ್ವೆಯಿಂದ
ಪರಮನ ಕೊಂಡಾಡಲಳವಲ್ಲ ||೧||

ಗರುಡ ಗಂಧರ್ವ ಕಿನ್ನರ ಕಿಂಪುರುಷರು
ಕರುಣೆಯ ಕೊಂಡಾಡಲಳವಲ್ಲ ||೨||

ಮಗಿಯ ನರೇಂದ್ರಗೆ (ಸ)ಗುಣ ಕೃಪೆಯನಿತ್ತಾ
ಅಗಣಿತನ ಕೊಂಡಾಡಲಳವಲ್ಲ ||೩||

೪

ರಾಗ: ಕಲ್ಯಾಣ, ತಾಳ: ಆದಿ

ಪಂಕಜ ಮಿತ್ರಕೋಟಿ ತೇಜಾ ನೀ
ಶಂಕರನವತಾರ ಸಹಜ ಈ
ಬಿಂಕದಯಾತ್ರೀ ಪೂಜ್ಯ
ಸೋಂಕಿದ ಮನುಜರು ಪಾವನ ರಾಜಾಧಿರಾಜ ||ಪಲ್ಲ||

ಆರೂಢಸ್ಥಲದಲಿ ನಿಂದೆ
ಮೂರು ಲೋಕದ ತಾಯಿತಂದೆ ನೀ
ಮೀರಿದ ಅಸುರರ ಕೊಂದೆ
ಸಾರಿ ಭುವನಕ್ಕಿಳಿದು ಬಂದೆ ತ್ರಿದಳದಲ್ಲಿನಿಂದೆ ||೧||

ಗರುಡ ಗಂಧರ್ವ ಯಕ್ಷಸುರರು ನಿಮ್ಮ
ಚರಣ ಕಮಲ ಭಜಿಸುವರು
ವರಗಳ ಪಡೆಯುತ್ತಿಹರು
ಸುರರು ದೇವರ್ಕಳು ಪೂಜಿಸುತ್ತಿಹರು ||೨||

ಧರೆಗಿಳಿದು ನೀವು ಬಂದು
ಮೀರಿದ ಪುರದಲ್ಲಿ ನಿಂದು
ನರೇಂದ್ರ ಮಗಿಯಗೆ ಬಂದು
ಸಾರಮತಿಗಳ ಪಾಲಿಸಿಂದು ನೀವು ಇಂದು ||೩||

೫

ರಾಗ: ಸಾರಂಗ, ಅಡತಾಳ

ಅಲ್ಲಮ ಪ್ರಭುವೆಂಬ ಆದಿನಾಮವ ನೀವು ಮರೆತಿರಲ್ಲಾ
ಬಲ್ಲೆ ಬಲ್ಲೆವು ಎಂಬ ಖುಲ್ಲತನದಿ ನೀವು ಮರೆತಿರಲ್ಲಾ ||ಪಲ್ಲ||

ಪರಮಪಾವನವಿದು ಪವಿತ್ರ ಮಾಡುವುದು
ದುರಿತ ದೋಷಂಗಳ ಪರಿಹರ ಮಾಡುವುದು
ಹರುಷದಿ ನೆನೆದರೆ ಗುರುತರ ಪದವುಂಟು
ತ್ವರಿತದಿ ಪಾಪವಿನಾಶವ ಮಾಡುವುದು ||೧||

ಗರುಡ ಗಂಧರ್ವ ಕಿನ್ನರರಿಗೆ ಮುಖ್ಯವು
ಸುರರು ದೇವರ್ಕಳು ನೆನೆವ ನಾಮವು ನೀವು
ಹರಿಬ್ರಹ್ಮಾದಿಗೆ ಮುಖ್ಯವಾದ ನಾಮವು
ಸರಿಯಿಲ್ಲ ಈ ನಾಮಕೆ ಮರೆಯದೆ ನೆನೆಯಿರಿ ಕಂಡ್ಯಾ ||೨||

ಜಗದೊಳು ಈ ನಾಮ ಪ್ರಕಟವಾದಂಥಾದ್ದು
ಬಗೆಬಗೆಯಿಂದಲಿ ಸ್ಮರಿಸುವ ನಾಮವು
ಮೃಗಧರನ ಸೂಡಿದ ದೇವನ ನಾಮವು
ಮಗೆಯ ನರೇಂದ್ರಗೆ ವೈಭವವಿತ್ತ ನಾಮವು ||೩||

೬

ರಾಗ: ಭೈರವಿ, ಆದಿತಾಳ

ಪ್ರಭುರಾಯನೆ ಶುಭಧ್ಯಾನದಿಂದೆ ಆನು ಭಜಿಸುವೆ ನಿಮ್ಮ ||ಪಲ್ಲ||

ಅಷ್ಟ ಮದಕರಿಗಳ ಮೆಟ್ಟಿ ಸೀಳಿದೆ ನೀನು
ಭ್ರಷ್ಟ ಭಂಡರನೆಲ್ಲ ಕಷ್ಟ ಬಡಿಸಿದೆ ||೧||

ಕಲಿಯುಗದಲ್ಲಿ ನೀನು ಹಲವು ಚಿತ್ತದ ಜನರ
ಬಲು ನರಕಗತಿಗೆ ಸಲೆ ನೂಕಿದೆ ||೨||

ಧರೆಗತಿ ದೊಡ್ಡದಾದ ಪುರತ್ರಿದಳದಲ್ಲಿ ವಾಸ
ನರೇಂದ್ರ ಮಗಿಯಗೆ ದಯದಿ ಪರಮ ಕೃಪೆಯಿತ್ತೆ ||೩||

೭

ರಾಗ: ಕನ್ನಡ ಕಾಂಭೋದಿ, ಆದಿತಾಳ

ನಯನದಿಂದ ನಿಮ್ಮ ನೋಡಿದೆ ನೋಡಯ್ಯ ಅಯ್ಯ ||ಪಲ್ಲ||

ಸದ್ಗುರುನಾಥನೆ ಸದಾಶಿವದೇವನೆ
ವಿದ್ಯೆಯಲ್ಲಿ ಸಮರ್ಥ ಪ್ರಭುರಾಯನೆ ||೧||

ಪವಾಡ ಮಾಡಿದೆಯ್ಯಾ ಪರಿಣಾಮನಿತ್ತೆ ನೀನು
ಯುವದೊಳು ಬಾಲೆಯರಿಗೆ ನಿರ್ಮಾಯನೆ ||೨||

ಧರೆಯೊಳಧಿಕವಾದ ತ್ರಿದಳದಲ್ಲಿ ನೆಲೆವಾಸ
ನರೇಂದ್ರ ಮಗಿಯಗೆ ದಯವಿತ್ತೆ ಅಲ್ಲಯ್ಯ ||೩||

೮

ರಾಗ: ದೇಶಿ, ಝುಂಪಾಲಾಳ

ನಾನೇಕೆ ದುರ್ಬಲನು ನಾನೇಕೆ ದೇಶಿಕನು
ಮಾನಾಭಿಮಾನ ಕಾಯ್ವ ಪ್ರಭುವಿರುವತನಕ ||ಪಲ್ಲ||

ಸಾಸಿರನಾಮದ ಹಳೆನಾಣ್ಯವೆನಗಿರಲಿಕ್ಕೆ
ಲೇಸಾಗಿ ಒಂದೊಂದ ಸ್ಮರಿಸಿ ಮುರಿಸಿ
ದೋಷಗಳೆದು ನಿರ್ದೋಷವೆಂಬ ಧಾನ್ಯವ ತಂದು
ಹಸನಾಗಿ ಪಕ್ವಾನ್ನ ಉಣಲುಂಟು ||೧||

ಅಚ್ಚ ತೀರ್ಥ ಪ್ರಸಾದವೆಂಬ ಕಾಮಧೇನುವಿರಲಿಕ್ಕೆ
ನಿಚ್ಚ ಜಂಗಮಮೂರ್ತಿ ಕೈಯಿಂದ ಕರೆಸಿ ತರಿಸಿ
ಎಚ್ಚರಿಕೆಯಲಿ ಸೇವಿಸಿ ತೃಪ್ತಿಬಿಟ್ಟು ಬಹು ಕಾಲ
ಮುಚ್ಚುಮರೆಯ ಪಂಚಾಮೃತವ ಭಾವಿಸಿ ಸೇವಿಸಿದೆ ||೨||

ಶ್ರೀ ವಿಭೂತಿಯೆಂಬ ವರವು ಎನಗಿರಲಿಕ್ಕೆ
ಪಾವನವಾಯಿತ್ತು ಎನ್ನಕಾಯವು
ದೇವಾ, ನರೇಂದ್ರ ಮಗಿಯಗೆ ಈ ವೈಭವವಿತ್ತು
ಕಾಯ್ವಾತ ನೀನಲ್ಲದೆ ಮತ್ತಾರಿಲ್ಲವಲ್ಲ ||೩||

೯

ರಾಗ: ಮಲ್ಹಾರ, ಜೇತಾಳ

ಇಂಥುದರ ಬಂದ ನಮ್ಮ ದಂದವಾಗಿ ಪುಣ್ಯಕ್ಕೆಮ್ಮ ||ಪಲ್ಲ||

ಜೇನ ತುಪ್ಪ ಸವಿಗಾಗಿ ಹೀನ ನೊಣ ಮೃತವಾಗಿ
ತಾನು ಕೊಟ್ಟ ಭಾಷೆಗಾಗಿ ದೀನನನ್ನು ಪಾಪ ಹೊಗೆಯಿಂ ||೧||

ಮಣ್ಣು ಹೊನ್ನು ಹೆಣ್ಣು ಮೂರು ಕಣ್ಣಿಗಿದು ಸವಿಸಾರು
ಸುಣ್ಣ ಕಲ್ಲ ಕಟ್ಟಿ ಭಾರ ಅಣ್ಣ ಹೊಯ್ಯ ಬೇಗ ನೀರು ||೨||

ಮಗಿಯ ನರೇಂದ್ರ ಜ್ಜಗದೊಳು ದಯವೆತ್ತಿ
ಬೇಗ ಪ್ರಭು ವಿದ್ಯ ಸತ್ಯ ಹಗರಣ ಮಾಡಿ ಮತ್ತೆ ದಯವಿತ್ತೆ ||೩||*

೧೦

ರಾಗ: ಕನ್ನಡ ಕಾಂಬೋದಿ, ಕರ್ನಾಟಕ ಅಡತಾಳ

ದಾಸಿ ನಾನು ಪ್ರಭುಭಕ್ತರ ಸದನದ
ದಾಸಿನಾ ದಾಸಿನಾ ದಾಸಿನಾ ||ಪಲ್ಲ||

ಅಂಗ ವಂಗ ಕಳಿಂಗ ಬಂಗಾಳ
ಸಿಂಗಳ ಗುರ್ಜರ ಗೌಳದೊಳು
ಶೃಂಗಾರ ಪಡೆದತ್ತಣೆಯ ಸಮ್ಮತಿಯ
ಮಂಗಸೂಳಿ ಸಂಗಪ್ಪನ ಸದನದ ||೧||

ಕಲಿಯುಗದೊಳು ತಾನು[ದ]ಲದಂಕನಾಗಿರ್ದ
ಬಲುಶಾಸ್ತ್ರ ದೊಳಗೆಲ್ಲ
ಒಲುಮೆಯೊಳು ಗುರುಕರುಣವ ಪಡೆದಿದ್ದ
ಸಲೆ ಪುರಾಣ ಚನ್ನಪ್ಪಸದನದ ||೨||

ನರೇಂದ್ರ ಮಗಿಯನು ನಿಮ್ಮ ಮಹಿಮೆಯನು
ವರ ವಿಸ್ತಾರದಿ ಸ್ತುತಿಸುವೆನು
ಪರಮ ಕವಿತ್ವಪೇಳಿದ ಮಹಾತ್ಮ
ಧುರಧೀರ ಗುರುಬಸವಪ್ಪನ ಸದನದ ||೩||

---

* ಈ ಹಾಡು ಅಸ್ಪಷ್ಟವಾಗಿದೆ (ಸಂ)

೧೧

ರಾಗ: ಕನ್ನಡ ಕಾಂಬೋದಿ, ತಾಳ: ಆದಿ

ಜ್ಞಾನಿಯೊ ಮಹಾದಾನಿಯೋ ನೀ
ಮನುಮುನಿ ವಂದಿತ ಅಲ್ಲಮಪ್ರಭು ||ಪಲ್ಲ||

ಬಸವೇಶ್ವರಗೆ ಪಂಚಪರುಷವಿತ್ತೆ
ಬಿಸಜಾಕ್ಷದೇವನೆ ಅಲ್ಲಮಪ್ರಭು ||೧||

ಈರೇಳು ಲೋಕದ ಅರಿವು ನಿಮಗುಂಟು
ಮಾರಹರ ದೇವ ಅಲ್ಲಮಪ್ರಭು ||೨||

ಬಾಲ, ನರೇಂದ್ರ ಮಗಿಯಗೆ ದಯವಿತ್ತೆ
ಲೋಲ ಮಗಿಯ ಚನ್ನ ಅಲ್ಲಮಪ್ರಭು ||೩||

೧೨

ರಾಗ: ಭೈರವಿ, ತಾಳ: ಆದಿ

ಸುಮ್ಮನೊಲಿವನೆ ಪ್ರಭುರಾಯ ಹಮ್ಮುಗಿಮ್ಮು ಬಿಟ್ಟು
ತಮ್ಮೊಳು ಘುಮ್ಮನೆ ಬೆರೆಯದನಕ ||ಪಲ್ಲ||

ತನುವನೆಲ್ಲ ದಂಡಿಸಿ ಬಲು ಮನವನೆಲ್ಲ ಒಬ್ಬುಳಿ ಮಾಡಿ
ಘನಮಹಿಮನ ಹೃದಯದಲ್ಲಿ ನೆನೆಯದನಕ ||೧||

ದಳಗಳ ಜರೆಯದನಕ ಮಲತ್ರಯ ಕಳೆಯದನಕ
ಹಲವು ಭಜನೆ ಬಿಟ್ಟು ತನ್ನ ಬಲು ದಯ ಪಡೆಯದನಕ ||೨||

ವಸುಧೆಯೊಳು ತ್ರಿದಳತಾತ ಶಶಿಧರ ಚನ್ನಲ್ಲಮನಾಥ
ಶಿಶುವು ನರೇಂದ್ರ ಮಗಿಯಗೆ ಹಸನಾಗಿ ದಯವಿಟ್ಟಾತ ||೩||

೧೩

ರಾಗ: ಕನ್ನಡ ಕಾಂಬೋದಿ, ಆದಿತಾಳ

ಗುರುವೆ ಗುಣಮಣಿಯ ಕಲ್ಪ
ತರುವಿನ ಪರುಷದ ಖಣಿಯ ಅಲ್ಲಮ ಪ್ರಭು ||ಪಲ್ಲ||

ಶ್ರೀಮನ್ಮಹಾದೇವ ಆ ಪ್ರಭು
ಪ್ರೇಮದಿ ಭಕ್ತರ ಕಾಯ್ವ ಆ ಪ್ರಭು
ಕಾಮಿತ ಫಲಗಳನೀವ ಆ ಪ್ರಭು
ರಾಮ ವ್ಯೋಮಕೇಶ ಆ ಪ್ರಭು ||೧||

ಸರಸಿಜ ಪೂಜಿತಗಾತ್ರ ಆ ಪ್ರಭು
ವರವೀರ ಪರಮಪವಿತ್ರ ಆ ಪ್ರಭು
ಧುರಧೀರ ಸುರನರಸ್ತೋತ್ರ ಆ ಪ್ರಭು
ಗುರುಕರಜಾತ ವಿಚಿತ್ರ ಆ ಪ್ರಭು ||೨||

ಒಂದು ತ್ರಿದಳದಿ ನಿಂದ ಆ ಪ್ರಭು
ಒಂದೂ ಭಯಗಳಿಲ್ಲೆಂದ ಆ ಪ್ರಭು
ಕಂದ ಮಗಿಯನರೇಂದ್ರಗೆ ಅಂದ ಆ ಪ್ರಭು
ದಂಡದಿ ಕಾಯಯ್ಯ ಇಂದು ಆ ಪ್ರಭು ||೪||

೧೪

ರಾಗ: ಭೈರವಿ, ಆದಿತಾಳ

ಹರಹರ ಏನಾಯಿತು ನಿಮಗೆ ಪ್ರಭುರಾಯ
ಏನಾಯಿತು ನಿಮಗೆ ||ಪಲ್ಲ||

ಹುಟ್ಟಿದ ಶಿಶು ಒಂದರಗಳಿಗಿರಲಿಲ್ಲ
ಹುಟ್ಟಿದೆಡೆಯ ನೀನು ಹೊಂದಲಿಲ್ಲ ಗುರುವೆ ||೧||

ಮಾಯಿಯ ನೋಡುತ ಮಾಯಿಯ ಕಾಡುತ
ಮಾಯಿ ಬಿಟ್ಟೊಡೆ ದಯನಿತ್ತೆ ಗುರುವೆ ||೨||

ನರೇಂದ್ರ ಮಗಿಯಗೆ ವರವಿತ್ತೆ ನೀ
ಬರಿದೆ ಜಂಜಾಟದೊಳು ಬೆರಸಿದೆ ಗುರುವೆ ||೩||

೧೫

ರಾಗ: ತೆಲಗ ಕಾಂಬೋದಿ, ಕರ್ನಾಟಕ ಅಡತಾಳ

ನೋಡ ಬನ್ನಿ ಪ್ರಭುರಾಯನ।ಭಕ್ತಿ ಮಾಡಿದರೆ
ಜನ್ಮ ಪಾವನ ।।ಪಲ್ಲ।।

ನರಕಾಂತಿಯ ಲೋಕ ಜೂಟನಿಗೆ ನಿಮ್ಮ
ಅರಿಕೆಯ ಭಾವ ಭಜನೆಗೆ ।।೧।।

ಸದಾಶಿವ ತಾನೆ ಒಂದು ರೂಪಾಗಿ ನಿಮ್ಮ
ಹೃದ್ಬಯ ನಿರ್ಮಳ ಮಾಡಬೇಕಾಗಿ ।।೨।।

ನರೇಂದ್ರ ಮಗಿಯಗೆ ಒಲಿದನು ತಮ್ಮ
ಕರುಣವಿಟ್ಟು ಪವಾಡ ಗೆಲಿದನು ।।೩।।

೧೬

ರಾಗ: ಭೈರವಿ, ತಾಳ: ಆದಿ

ಎಂದು ಕಾಂಬೆ ನಾ ಎನ್ನ ಮನೋಹರನ
ತಂದೆ ಶ್ರೀ ಪ್ರಭುವಿನ ಪಾದಾಂಬುಜ ನಾನೆಂದು ಕಾಂಬೆನು ।।ಪಲ್ಲ।।

ಸರ್ಪಭೂಷಣನ ಶಶಿರವಿ ತೇಜನ
ಕಪ್ಪಗೊರಳನ ಕಾಮಸಂಹರನ ನಾನೆಂದು ಕಾಂಬೆನು ।।೧।।

ತ್ರಿಶೂಲಧರನ ತ್ರಿಪುರದಹನನ
ಕಾಶಿಗೆ ಮಿಗಿಲಾದ ತ್ರಿದಳವಾಸನ ನಾನೆಂದು ಕಾಂಬೆನು ।।೨।।

ಮಗಿಯ ನರೇಂದ್ರಗೆ ದಯವಿಟ್ಟ ದಾತನ
ಸುಗುಣ ಮೋಹನ್ನನ ಸುಜನ ರಕ್ಷಿಪನ ನಾನೆಂದು ಕಾಂಬೆನೊ ।।೩।।

೧೭

ರಾಗ: ಸಕಲಾಭರಣ, ಅಡತಾಳ

ಬಂದೆಯ್ಯ ಬಂದೆಯ್ಯ ಎಮ್ಮ ಭವಬಂಧನ ದೂರ
ಬಂದೆಯ್ಯ ಬಂದೆಯ್ಯ ಎಮ್ಮ ಭವಭೀತಿ ಪರಿಹರ
ಕಂದುಗೊರಳ ದೇವ ನೀನು ತ್ರಿಪುರಸಂಹರ ।।ಪಲ್ಲ।।

ಸರಸ ನಿರಸ ಬಲ್ಲೆ ಸುಗುಣ ಮೋಹನ್ನ
ಅರಸರ ಅರಸಾದೆ ಅಗಣಿತ ಗುಣ ರನ್ನ
ಪರುಷ ಪಾವನ ಮೂರ್ತಿ ಪರಮ ಪಾವನ್ನ
ಹರುಷಿತ ಕಲುಷಿತಹರ ದುರಿತ ಎನ್ನ ||೧||

ಚಾರುಚರಣ ದಿವ್ಯಚತುರ ಚಕೋರ
ವರ ವೀರಶೈವರೊಳು ಗುಣಗಂಭೀರ
ಕರುಣ ಕಟಾಕ್ಷನೆ ಪರಿಣಾಮ ಸಾರ
ಮರಣರಹಿತ ದೇವ ಮೊಗ್ಗೆ ಅಲ್ಲಮ ಧೀರ ||೨||

ಮಂದರದಯ್ಯ ಮಾಯ ಗೆದ್ದ ಮೂರ್ತಿ
ದಂದುಳ್ಳ ಭಕ್ತರಿಗೆ ಧಯವಿಟ್ಟೆ ಕೀರ್ತಿ
ದುಂದುಭಿ ಬಾಜಿಸು ವರವ . . . ಅರ್ತಿ
ಕಂಡು ಮಗಿಯ ನರೇಂದ್ರನ ರಕ್ಷಿಸು ಕುಂದುಕೊರತೆ ||೩||

೧೪

ರಾಗ: ಸಕಲಾಭರಣ, ಆದಿತಾಳ

ಕಾಯೊ ದಿಗಂಬರೇಶ ಧಯವಿಡು ಲೇಶ ||ಪಲ್ಲ||

ನೀರಮೇಲೆ ನಡೆದು ಬಂದೆ
ವಾರಿಜ ಪು ೧[ಷ್ಪ]೧ ಉದಯಕೆ ೨[ಬಂ]೨ಡೆ
ಆ ರೂಢ ಪರಬ್ರಹ್ಮನ ಮುಂದೆ
ಕರದಿಂಡ ೩[ರ್ಚಿಸಿ]೩ ನೀ ಶರಣೆಂದೆ ||೧||

ಅಲ್ಲಿಂದದೃಶ್ಯದಿ ಹರಿ ೪[ದೆ]೪
೫[ಬಲ್ಲ]೫ ನಿಮ್ಮ ಸುತ ನಿರ್ವಾಣೇಶಗೆ
ಕಲ್ಲ ಹಾಸುಗೆ ಗದ್ದುಗೆ
ಅಲ್ಲಮ ನಡೆ ಗೂಗಿಕೊಳ್ಳಕೆ ||೨||

---

೧-೧ ಟ (ಮೂ); ೨-೨ ಒಂದೆ (ಮೂ); ೩-೩ ರ್ಚನೆ(ಮೂ); ೪-೪ ಗೆ (ಮೂ); ೫-೫ ಬಲ್ಲಿ(ಮೂ)

ದೇಶದೇಶಕೆ ಲೇಸ
ವಾಸ ಶ್ರೀರಂಗನಗರಾಧೀಶ
ಶಿಶುಮಗೆಯ ನರೇಂದ್ರ ನಿಮ್ಮ ಸಾಹಸ
ವಸುಧೆಯೊಳು ತ್ರಿದಳ ಭೂಕೈಲಾಸ ||೩||

೧೯

ರಾಗ: ತೆಲಗ ಕಾಂಬೋದಿ, ಆದಿತಾಳ

ಈ ದೇಶಕಧಿಪತಿ ಸ್ವಾಮಿ ನೀನಲ್ಲವೆ
ಈಶ ಸರ್ವೇಶ ಜಗದೀಶ ಮಹೇಶ ||ಪಲ್ಲ||

ಕಾಮದಹನ ಕಮಲಜಮರ್ದನ ಕರುಣಿ ಅಲ್ಲಯ್ಯ
ಸಿದ್ಧರಾಮನ ಗರ್ವ ಕೆಡಿಸಿದಂಥ ಶಂಭು ಜಯಜಯ
ಸೋಮ ನಿಸ್ಸೀಮ ಬಲು ಭೀಮ ಭಕ್ತರ ಪ್ರೇಮ ||೧||

ಆರುದರ್ಶನಕಧಿಪತಿಯಾದ ಆರೂಢ ನೀನೆ
ಮಾರಹರ ಮದನಹರನವತಾರ ಮಹಿಯ ಪ್ರಭುರಾಯನೆ
ಶರಣು, ನಿಮ್ಮ ಚರಣಜನಕರುಣ ಸರ್ವಾಂಗ ಭರಣ ||೨||

ಬಾಲ ನರೇಂದ್ರ ಮಗಿಯಗೆ ವರವಿತ್ತಾತ ಧೀರ
ಕಾಲಸಂಹರ ಕರಕಪಾಲ ತ್ರಿಶೂಲಧರ, ಲೋಲ ಪ್ರತಿಪಾಲ
ಕೃಪಾಲ, ನಿರಾಳ ||೩||

೨೦

ರಾಗ: ಸಾರಂಗ, ತಾಳ: ಆದಿ

ಪ್ರಭುಸಾಹೇಬಜಿ ತುಮದೇಖತ ಪಾಪಗಯೋ ||ಪಲ್ಲ||

ಹಮ್‌ತೊ ಗರೀಬ ತುಮ್ ತೊ ಸಾಹೇಬ
ತನು ಮನ ಧನ ತುಮ ಪರಿವಾರ ||೧||

ಚಂದ್ರಧರ ಆವತ ಖಗಗಮನ ವಂದಿತ
ಮಗಿಯ ನರೇಂದ್ರಕೆ ಚರಣ ದಿಖಾವತ ||೨||

೨೧

ರಾಗ: ಹಮ್ಮೀರ, ಕಲ್ಯಾಣ , ಆದಿತಾಳ

ಗಿರಿವಾಸ ಗುಹೇಶ ಮಹೇಶ ||ಪಲ್ಲ||

ಆ ಅಲ್ಲಾ ತೂಹಿ ಪ್ರಭುರಾಯಾ
ತುರ್ಝು ಬಿನ ಮುರ್ಝು ನಹಿ ಕೋಯಿ ||೧||

ಸಬ್ ದೇವಂವಮೆ ಮಹಾದೇವ ಬಡಾ
ಮನ್ಮನೊ ಪ್ರಿಯ ||೨||

ಮಗಿಯ ನರೇಂಪ್ರಕು ಸಬ್ ವಿದ್ಯೆ ದಿಯೆ ತುಮ್
ಗಗನ ಗಂಭೀರ ಗುಣಧೀರ ||೩||

೨೨

ರಾಗ: ಭೈರವಿ, ಆದಿತಾಳ

ಪ್ರಭುರಾಯಕಾ ವರ್ಣನ ಕೀರ್ತಿ ಗಾಹೆ ||ಪಲ್ಲ||

ನೀಲಕಂಠರಾಜೆ ಪ್ರಾಣನಾಥ ಮಾರ್ಝು
ಪಾಯ ವಂದನ ತರ್ಝು
ದೇವಾ ಕೃಪಾ ಕೇಲೆ ಆಜ ||೧||

ಮದನಮಥನಧೀರ ಮಾರ್ಝು ಮನೋಹರ
ಕೀರ್ತನ ಕೇಲೆ ಘಾರ ಸ್ವಾಮಿ ತೂ ಗುಣಗಂಭೀರ ||೨||

ನರೇಂದ್ರ ಮಗಿಯ ಭೋಳಾ ಆಹಾ ಘಾರಟಿ ದುರ್ಬಳ
ತ್ಯಾವರಿ ದಯಾಕೇಲಾ ತೊ ಪಾವನ್ನ ಪವಿತ್ರ ಝಾಲಾ ||೩||

೨೩

ರಾಗ: ಭೈರವಿ, ತಾಳ: ಆದಿ

ಭಾಪುಭಲರೇ ದೇವ ಪವಾಡದ ಬಸವ
ನೀ ಇಳಿದೆ ಧರೆಗೆ ದೈತ್ಯನ ಸಂಹಾರಕೆ ||ಪಲ್ಲ||

ಯಾರೋ ಯಾರೊಯೆಂದ
ಅಮಳಾಕ್ಷಿ ನುಂಗಿನಿಂದ
ನನಗ್ಯಾಧಿರಿಲ್ಲ ಬಸವನ ಕೊಂದೆನಲ್ಲ ||೧||

ಝಾವ ಸುಮ್ಮಾನಿದ್ದು ಹೊಟ್ಟೆ ಹರಿದು ಹೊರಬಿದ್ದು
ಶಿಂಶುಮಾರ ಮರ್ದನ
ಪೊಗಳಿದರು ಬಸವನ ||೨||

ನೀ ಕೈಲಾಸಕೆ ಪೋಗಿ ನಮಿಸಿ ಶಿವನಿಗೆ
ನರೇಂದ್ರ ಮಗಿಯಗೆ
ಕರುಣವಿಟ್ಟೆ ಬಸವ ಶರಣ ||೩||

೨೪

ರಾಗ: ಶ್ರೀರಾಗ

ಇತ್ತಲಿದೆ ನೋಟ ನಿತ್ಯ ನಿರ್ಮಾಯನಾಟ ||ಪಲ್ಲ||

ಕಂಡು ಕಾಣದ ನೋಟ, ಕಾಂಕ್ಷೆಯಿಲ್ಲದ ನೋಟ
ಕೆಂಡದುರಿಯ ನೋಟ ಕುಡಿಯದಾಟ
ಜೊಂಡುದೋರದ ನೋಟ ಜಡರಾಜರುವನೋಟ
ಉಂಡು ಉನ್ಮನಿನೋಟ, ಉರಪೀಠ ||೧||

ತೋರಿ ತೋರದ ನೋಟ ತುದಿಯರ್ಲಕ್ಷದ ನೋಟ
ಮೀರಿನೋಡುವ ನೋಟ ಮರೆಯದಾಟ
ಪೂರ್ವಪಶ್ಚಿಮನೋಟ ಪರಮಾನಂದದ ನೋಟ
ವಾರುಧಿ ಒಳನೋಟ ವನಜೂಟ ||೨||

ಕಣ್ಣು ಮೇಲೆ ಕಣ್ಣು ಕಾಂಬನಿಗಾ ಚಿನ್ನ
ಪುಣ್ಯ ಪಾಪದ ಸ್ಥಲ ಪರೀಕ್ಷ ನಿನ
ಹೆಣ್ಣು ಗಣಂಗಳೇ ಹೆರೆ ಹಿಂಗ ನಿರ್ಮಳ
ಚಿನ್ನ ಮಗಿಯ ಪ್ರಭು ಚಿದ್ಘನ ಮೂರುತಿ ||೩||*

---

* ಈ ಹಾಡಿನ ಅರ್ಥ ಅಸ್ಪಷ್ಟ (ಸಂ)

# ನೀತಿ-ಬೋಧಾರೂಪದ ಸ್ವರವಚನಗಳು

೧

ರಾಗ: ಭೈರವಿ, ಆದಿತಾಳ

ಪ್ರಭುವಿನಂಥ ಸದ್ಗುರುವಿರಲಿಕ್ಕೆ
ವೈಭವಕ್ಕೇನು ಕೊರತೆಯಿಲ್ಲ ||ಪಲ್ಲ||

ಕಂಗಳು ಮೂರುಳ್ಳ ಜಂಗಮಲಿಂಗವ
ಹಿಂಗದೆ ನೀವು ಸೇವೆಯ ಮಾಡಿ
ಅಂಗಜಮರ್ದನ ಆದಿಮೂರುತಿಯ
ಸಂಗವ ಪಿಡಿದು ಗತಿಗೆ ಸಾರಿ ||೧||

ವೇದ ನಾಲ್ಕಕೆ ನಿಲುಕದ ಮಹಿಮನ
ಸಾಧಿಸಿಕೊಳ್ಳಿ ಕರುಣವ ಬೇಗ
ಆದಿಯನಾದಿಯ ತಿಳಿದು ನೀವು ಮತ್ತೆ
ಓದಿ ಅಲ್ಲಮಪ್ರಭು ಮಂತ್ರವನು ||೨||

ಗುರುಕರಜಾತನ ಹೃದಯ ಕಮಲದಲಿ
ಬೆರಕೊಂಡು ಇರುವುದು ಸುಲಭತನ
ನರೇಂದ್ರ ಮಗಿಯನ ಸಲಹು[ವ]ದಯಾಲನ
ಕರಸ್ಥಲದ ದೇವನೆಂದು ಬಗೆಯಿರಿ ||೩||

೨

ರಾಗ: ತೆಲಗ ಕಾಂಬೋದಿ, ಆದಿತಾಳ

ಎಚ್ಚರಣ್ಣಾ ಪ್ರಭುರಾಯನ ಪಾದದಲ್ಲಿ ಎಚ್ಚರಣ್ಣಾ
ಚುಟ್ಟಾಕ ಭಕ್ತಿಯ ಮಾಡಿ "ಹ್ಹೂ ಹಾ" ಬಳಲದಿರಿ ||ಪಲ್ಲ||

ಮೂರುಲೋಕದ ಬಹುಸಾರಮ್ಮೂರ್ತಿ ಅಲ್ಲಯ್ಯ
ಕಾರುಣ್ಯನಿಧಿ ದಯಾಳು ಗುರುಚೆಲ್ಲಯ್ಯನ
ಆರಾದರೆ ನೀವು ಸಾರಭಕ್ತಿಯಿಂದಲಿ
ಮೆರೆದ ಪಾದಗಳ ಪಡಕೊಳ್ಳಿರಣ್ಣಾ ||೧||

ಸಂಸಾರದಲ್ಲಿ ಮನವ ಹರಿಯಗೊಡದೆ ನೀವು
ಆಶಾಬದ್ಧ೧[ರಾಗಿ]೧ನೀವು ಹೇಸಿಯಾಗಬೇಡಿರಿ
ಸಾಸಿಗ ಗುರುವಿನ ಚರಣ ಕಮಲವನು
ಬೇಸರವಿಲ್ಲದೆ ಭಜಿಸಿರಿಯಣ್ಣಾ ||೨||

ದೇಶಕೋಶ ತಿರುಗಿ ನೀವು ಭಂಗಗೆಟ್ಟು ದಣಿಯದಿರಿ
ಲೇಸುಳ್ಳ ದೇವರಾಯನ ಸೇವೆಯ ಮಾಡಿ
ಭಾಸಿ ನರೇಂದ್ರ ಮಗಿಯಗೆ ದಯವಿತ್ತಾ ಸ
ರ್ವೇಶ ಪ್ರಭುವಿನ ಭಜಿಸಿರಿಯಣ್ಣಾ ||೩||

೩

ರಾಗ: ತಲಗಕಾಂಬೋದಿ, ಆದಿತಾಳ

ಅಲ್ಲಯ್ಯನ ಸೇವೆ ಮಾಡಲಿಲ್ಲ।ಇನ್ನಾತರಜನ್ಮ ||ಪಲ್ಲ||

ಕಣ್ಣುಮುಚ್ಚಿ ನೀ ಪರಬ್ರಹ್ಮವ ಕಾಣಲಿಲ್ಲ
ಹೆಣ್ಣಿನೊಳಗೆ ಸಿಲ್ಕಿದೆಲ್ಲಾ।ಇನ್ನಾತರ ಜನ್ಮ ||೧||

ಧರ್ಮವ ಮಾಡಿ ಬೇಗ ಕರ್ಮವ ಕಳೆಯಲಿಲ್ಲ
ಮರ್ಮವ ತಿಳಿದು ನಡೆಯಲಿಲ್ಲಾ। ಇನ್ನಾತರ ಜನ್ಮ ||೨||

ಧರೆಯೊಳಧಿಕವಾದ ಪುರ ತ್ರಿದಳಕ್ಕೆಲ್ಲ
ನರೇಂದ್ರ ಮಗಿಯನ ಸಲಹುವ ಬಲ್ಲ।ಇನ್ನಾತರ ಜನ್ಮ ||೩||

೪

ರಾಗ: ಪಾಠ್ಯ, ಆದಿತಾಳ

ಕಡು ದುರಿತವ ಬೇಗ ಓಡಿಸಿದ ಮಹಾದೇವನ
ಬಿಡದೆ ನೀವು ಭಜಿಸಿರಿ ದೃಢವುಳ್ಳ ಪ್ರಭುರಾಯನ ||ಪಲ್ಲ||

ಕಂದುಗೊರಳ ದೇವ ಇಂದು ಶೇಖರನು
ಇಂದೆಮ್ಮ ಸಲಹಲ್ಕೆ ಬಂದನು ಅಲ್ಲಯ್ಯನು ||೧||

---

೧-೧ x(ಮೂ)

ಸರ್ಪಭೂಷಣನು ಕರ್ಪೂರಲೇಪನು
ತಪ್ಪದೆ ವರವಿತ್ತನು ಗುಪ್ತದಿ ಪಾಲಿಪನು ||೨||

ಅಗಣಿತ ಮಹಿಮನು ಜಗದೊಳು ಪ್ರಸಿದ್ಧ
ಮಗಿಯ ನರೇಂದ್ರಗೆ ಬಗೆಯಿಂದ ರಕ್ಷಿಸಿದನು ||೩||

೫೫

ರಾಗ: ತೆಲುಗ ಕಾಂಬೋದಿ, ಆದಿತಾಳ

ಪ್ರಭುಪಾದಪದ್ಮವ ನೋಡಿರಣ್ಣಾ
ಶುಭಧ್ಯಾನದಿಂದೆ ನೀವು ನಡೆಯಿರಣ್ಣಾ ||ಪಲ್ಲ||

ಕರ್ಮಕಂಟಕವೆಲ್ಲ ಕಳೆಯಿರಣ್ಣ
ಧರ್ಮವ ಹಿಡಿದು ನೀವು ನಡೆಯಿರಣ್ಣ
ದುರ್ಮತಿಗಳನೆಲ್ಲ ಬಿಡಿರಿಯಣ್ಣಾ
ವರ್ಮದಿ ಪಾಪವ ಕಳೆಯಿರಣ್ಣಾ ||೧||

ಸತ್ಯದಿಂದ ವಾಣಿಗಳನು ನುಡಿಯಿರಣ್ಣ
ನಿತ್ಯನಿರಂಜನನ ಸೇವೆ ಮಾಡಿರಣ್ಣ
ಅರ್ತಿಯಿಂದ[೮]ಆದಿಲಿಂಗನ ಕೂಡಿರಣ್ಣ
ಭೃತ್ಯನಾಗಿ ಭಜಿಸಿ ಭವವೀಡ್ಯಾಡಿರಣ್ಣ ||೨||

ಹುಸಿ ಕಳವು ಪರದಾರ ಬಿಡಿರಿಯಣ್ಣ
ಹಸನಾಗಿ ಮನದ ಸಂಶಯ ಕಳೆಯಿರಣ್ಣ
ಶಿಶು ನರೇಂದ್ರ ಮಗಿಯನ ಸೊಲ್ಲ ಕೇಳಿರಣ್ಣ
ವಸುಧೆಯೊಳು ಈ ಮಾತ ನಂಬಿರಣ್ಣ ||೩||

೫೬

ರಾಗ: ತೆಲುಗ ಕಾಂಬೋದಿ, ಆಡತಾಳ

ಸಜ್ಜನರ ಸಂಗದಿಂದ ಸದ್ಗತಿಯಪ್ಪುದು
ದುರ್ಜನರ ಸಂಗದಿಂದ ನರಕತಪ್ಪದು ||ಪಲ್ಲ||

---

೮-೧ X (ಮೂ)

ದುಗ್ಧದೊಳು ಜಲಕೂಡಿ ದುಗ್ಧಜಲ ತನ್ನಂತೆ ಮಾಡಿ
ದುಗ್ಧ ಸಜ್ಜನಕೆ ಉಪಮೆಯು। ತಿಳಿದೊಮ್ಮೆ ನೋಡಿ ||೧||

ಹಸನಾದ ಪರಿಮಳದೊಳು ವಿಷಗುನ್ನಿ ಬೆರೆತಂತೆ
ಈ ವಿಷಗುನ್ನಿ ದೂಷಕರುಪಮೆಯು ತಿಳಿದೊಮ್ಮೆ ನೋಡಿ ||೨||

ಅಲ್ಲಮನ ಕೃಪೆಯಿಂದ ಸೊಲ್ಲಿಸಿದ ಮಗಿಯ ನರೇಂದ್ರ
ಬಲ್ಲ ಭಾವಕರು ತಿಳಿದೊಮ್ಮೆ ನೋಡಿ ||೩||

೭

ರಾಗ: ಶ್ರೀ ರಾಗ ತಾಳ, ತ್ರಿವಿದಿ

ಸ್ವಲ್ಪವೆಂದೆನ್ನದಿರಿ ಷಡಕ್ಷರಿಯ ಮಂತ್ರ
ಕಲ್ಪಿಸಿದುದು ಸಾಧ್ಯವು
ಅಲ್ಪಸುಖವಳಿದು ಕೈಲಾಸ ಪದವಿಗೆ
ಬಲ್ಪಿನಿಂದಲಿ ಒಯ್ಯುವುದು ||ಪಲ್ಲ||

ಸಾನಂದಗಣನು ಯಮನ ಪುರದ ಮುಂದೆ ಆನಂದದಿಂದ ಹಾಯಲು
ಮನುಜರು ನರಕದೊಳ್ ಮುಳುಗಿ ಬಿದ್ದಿರೆ ಕಂಡು
ಓಂ ನಮಃ ಶಿವಾಯ ಎನಲು
ಮನವೊಲಿದುದವರೆಲ್ಲ ಓಂ ನಮಃ ಶಿವಾಯ ಎನಲು
ಬಿನುಗು ನರಕವ ಬಿಟ್ಟು
ತನತನಗೆ ಹೋದರು ಕೈಲಾಸಕ್ಕೆ ಮತ್ತೆ
ಯಮನ ಪುರವು ಹಾಳಾಗಿ ||೧||

ಅಜಗಣ್ಣಯ್ಯನು ತಾನು ಗೋದಿ ಹೊರೆಯ ಹೊದ್ದು
ಝುಗ ಝುಗಿಸುತ ಬರಲು
ಸುಜನನು ಹೊರೆಯ ಸಹಿತ ಬಾಗಿಲೊಳು ಬಾಗಿ
ನಿಜವಾಗಿ ಹೊರೆಗೆ ತಾಗಿ
ಮೂಜಗವರಿವಂತೆ ಓಂ ನಮಃ ಶಿವಾಯ ಎಂದು
ಬಿಜಯ ಮಾಡಿದ ಕೈಲಾಸಕೆ

ಸುಜನಿ ಮುಕ್ತಾಯಕ್ಕ ಅಳುತಿರೆಯದ ಕಂಡು
ತ್ರಿಜಗದೊಡೆಯನು ಬೋಧಿಸಿ[೧][ದ][೧] ||೩||

ಸತ್ಯಂಧರಚೋಳ ಓಂ ನಮಃ ಶಿವಾಯ ಎಂಪು
ಮತ್ತೆಪುಟ್ಟಿಯು ತಿವಿಸಿ
ಪುತ್ರನ ಪಡೆದು ಪವಾಡಂಗಳ ಮಾಡಿ
ಸತ್ಯಕೈಲಾಸ ಪಡೆದ
ಚಿತ್ತಜಹರ ಅಲ್ಲಮಪ್ರಭುಗುರುವರನೀಡಾಗ್ಗಿ ಸ್ತುತಿಸಿ ನಿಮ್ಮಾ
ಭೃತ್ಯನು ಮಗಿಯನರೇಂದ್ರ ಪೇಳಿದ ವಚನ
ಚಿತ್ತೈಸಿ ಜನಾಧಿಜನ ||೪||

೪

ರಾಗ: ಭೈರವಿ, ಕರ್ನಾಟಕ ಅಡತಾಳ

ಸಿರಿಯ ನಚ್ಚಬೇಡಿ ಹೇ ಮನುಜರೆ ನೀವು
ಸಿರಿಯ ನಚ್ಚಬೇಡಿ
ಸಿರಿಯ ನಚ್ಚಿದವರೇನಾಗಿ ಹೋದರು
ಸಿರಿಯ ನಚ್ಚಬೇಡಿ ||ಪಲ್ಲ||

ಕೌರವ ಪಾಂಡವರು ಕಡಿದಾಡಿ ಮಡಿದರು
ಭೀಮನು ಹೊಡೆದನು ಕೌರವ ಮಡಿದನು ||೧||

ಕರ್ಣನು ದ್ರೋಣನು ಭೀಷ್ಮನು ಮಡಿದರು
ಭೀಮನು ಹೊಡೆದನು ಅಶ್ವತ್ಥಾಮನು ಮಡಿದನು ||೨||

ಅಲ್ಲಮನ ಕೃಪೆಯಿಂದ ಮಗೆಯ ನರೇಂದ್ರನೆ
ಧರೆಯೊಳು ದೊರೆ, ದಾತ, ಜನರುಗಳೆಲ್ಲರು ||೩||

೧-೧ x (ಮೂ)

೯

ರಾಗ: ವರಾಳಿ, ಆದಿತಾಳ

ಯಾತಕ್ಕೆ ಈ ಬುದ್ಧಿ ಸಲ್ಲದು। ಪ್ರಭುರಾಯಗಲ್ಲದು ||ಪಲ್ಲ||

ನೀತಿ ಧರ್ಮದಿಂದೆ ಪ್ರಭುವಿನ
ಪ್ರಿತಿಬಡಿಸೆ ಫಲಗಳು ಸಾಧ್ಯ
ಜಾತಿಭ್ರಷ್ಟರ ಹೊರೆಯ ತಂದು
ಕಾತರದಿಂದ ಕೆಡಬೇಡಣ್ಣ ||೧||

ಲೋಕದೊಳು ನಗೆಗೇಡು
ಕಾಕುಬುದ್ಧಿಯಿಂದ ಕೇಡು
ತಾಕುನಿರೋಧಗಳು ತಟ್ಟೆಯ
ನೇಕ ಜನ್ಮದಲಿ ಹುಟ್ಟಿ ||೨||

ಮಗಿಯ ನರೇಂದ್ರ ನುಡಿದ
ಜಗದೊಳು ಪ್ರಸಿದ್ಧ ಬಗೆದ
ಅಘಹರ ಮಾಡಿಕೊಳ್ಳೊ
ಸುಗುಣ ಜಾಣರ ಜಾಣ ||೩||

೧೦

ರಾಗ: ಕನ್ನಡ ಕಾಂಬೋದಿ, ಆದಿತಾಳ

ಪ್ರಭುರಾಯನ ನಾಮವ ನೆನೆ ಮನವೆ
ಗುರು ರಾಯನ ನಾಮವ ನೆನೆ ಮನವೆ
ಕರ್ಮಬಂಧನ ಕೊಯ್ವದನ ||ಪಲ್ಲ||

ಜಪವನು ಬಲ್ಲೆನು ತಪವನು ಬಲ್ಲೆನು
ವಿಪರೀತಗಳ ಬಲ್ಲೆನೆನಬೇಡ
ಕಪ್ಪುಗೊರಳನ ಕಾಮಸಂಹರನ
ತಪ್ಪದೆ ತಡೆಯದೆ ನೆನೆ ಮನವೆ ||೧||

ಯಂತ್ರವ ಬಲ್ಲೆನು ಮಂತ್ರವ ಬಲ್ಲೆನು
[೧][ತಂತ್ರವ][೧]ಬಲ್ಲೆನೆಂದೆನಬೇಡ
ತಾಂತ್ರಿಕ ಅಲ್ಲಮ ಪ್ರಭುವಿನ ನಾಮ
ನಿಶ್ಚಿಂತದಿ ನೆನೆ ಕಂಡ್ಯಾ ಏ ಮನವೆ ||೨||

ಜ್ಞಾನವ ಬಲ್ಲೆನು ಮೌನವ ಬಲ್ಲೆನು
ಧ್ಯಾನವ ಬಲ್ಲೆನೆಂದೆನಬೇಡ
ತಾನೆ ನುಡಿಸಿದನರಿಯ ಮಗೇಂದ್ರಗೆ
ಚಿನ್ಮಯನಾಮವ ನೆನೆಮನವೆ ||೩||

೧೧

ರಾಗ: ಕನ್ನಡ ಕಾಂಬೋದಿ, ತಾಳ: ಕರ್ನಾಟಕ ಆಡತಾಳ

ತಕತಾ ನೆಲ್ಲೆಲ್ಲಿಲ್ಲ ಪ್ರಭುವೆ।ತಾನೆಲ್ಲಿಲ್ಲೊ ||ಪಲ್ಲ||

ಜೈನನಿದ್ದರೆ ಹೇಗಿರಬೇಕು।
ಜಿನಮುನಿ ಶಾಸ್ತ್ರವ ನಂಬಿರಬೇಕು
ತನು ಆತ್ಮ ಬೇರೆ ಬೇರೆ ನೋಡಲುಬೇಕು।
ಮನ ವಚನ ಕಾಯ ಗುಪ್ತ ತಾಳಿರಬೇಕು ||೧||

ಬ್ರಾಹ್ಮಣನಿದ್ದರೆ ಹೇಗಿರಬೇಕು
ಬ್ರಹ್ಮಕರ್ಮವ ಬಲಿದಿರಬೇಕು
ಅಗ್ರಹಾರದಿಂದ ಬಂದು ವ್ಯವಹಾರ ಮಾಡಿತಂದು
ಉದರ ಪೋಷಣ ಹೊರೆತಿರಬೇಕು ||೨||

ಲಿಂಗವಂತನಿದ್ದರೆ ಹೇಗಿರಬೇಕು
ಗುರು-ಲಿಂಗ-ಜಂಗಮವ ಬೆರೆತಿರಬೇಕು
ಮಗೆಯ ನರೇಂದ್ರ ಪೇಳಿದ ಬಗೆಯಂತೆ
ತಮ್ಮ ಕುಲಮಾರ್ಗದಲಿ ಶುದ್ಧವಿರಬೇಕು ||೩||

೧-೧ x(ಮೂ)

# ಇತರ ಸ್ವರವಚನಗಳು

## ಆರತಿ ಪದಗಳು

||ಒ||

೧

ರಾಗ: ಶಂಕರಾಭರಣ, ರೂಪಕ ತಾಳ

ಜಯದೇವ ಜಯದೇವ ಜಯಪ್ರಭುರಾಯ
ಪ್ರಿಯದಿ ಆರತಿ ಮಾಡುವೆ ಸ್ವಾಮಿ ನಿರ್ಮಾಯ ||ಪಲ್ಲ||

ಮಾಯಾಕೋಲಾಹಳ ಜಯವಂತ ಭಾನು-
ಕಾಯ ಬ್ರಹ್ಮಾಂಡವ ನೆಲಸಿಹೆ ನೀನು ||೧||

ಕರುಣುಳ್ಳ ಮಹಂತದೇವ ಅಲ್ಲಮ
ಪರಮಭಕ್ತರ ಸಲಹುವೆ ಗುರುವೇ ಬಲು ಭೀಮ ||೨||

ಅಂಗಜ ಮರ್ದನ ಆದಿಜಂಗಮ
ಮಗಿಯ ನರೇಂದ್ರಗೆ ಕೃಪೆಯಿಟ್ಟ ಪ್ರೇಮ ||೩||

||ಒ||

೨

ರಾಗ: ಆಹೇರಿ ಆದಿತಾಳ

ಜಯಜಯ ಆರತಿ ಪ್ರಭು ತುಮ್ಹಾರೆ
ಕಾಯಜ ಮರ್ದನ ಅಸುರ ಸಂಹಾರೆ ||ಪಲ್ಲ||

||ಒ||

ಗಜಚರ್ಮಾಂಬರಧರ ತ್ರಿಶೂಲಿ
ಅಜಶಿರಭೇದನ ಕರಕಪಾಲಿ ||೧||

ತನುಭಸ್ಮಾಂಗಿ ಗಳರುಂಡ ಮಾಲಾ
ಜನವಂದಿತ ಪರಮ ಕೃಪಾಲಾ ||೨||

ಮಗಿಯ ನರೇಂದ್ರ ಕು ಬಹುಕಾಲ ರಕ್ಷಿ
ಜಗಭರಿತಕಿ ಚರಣ ಮ್ಯೆ ಅಪೇಕ್ಷಿ ||೩||

## ಜೋಗುಳ ಪದಗಳು

೧

ರಾಗ: ಭೈರವಿ ಆದಿತಾಳ

ಜೋಜೋ ಸುಜ್ಞಾನಿಯಮ್ಮನ ಕಂದನೆ
ಜೋಜೋ ಅಜ್ಞಾನ ಹರ[ನೆ]
ಜೋಜೋ ವಿಘ್ನೇಶ್ವರಪಿತನೆ
ಜೋಜೋ ಯಜ್ಞಕ್ಕೆ ಕರ್ತುವೆ ||ಪಲ್ಲ||

ಹೆಗಲಿಗೆ ಮೃದಂಗವ ಹೊದ್ದು ಮಾಯೆಯ
ಹಗರಣವ ನೋಡುವೆನೆನುತ
ಸೊಗಸಿನಿಂದಲಿ ಬಂದು ನಿಂದಿರೆ ಕಂಡು ಬೆ-
ದರ್ಗೊಂಡು ಜನ ನೋಡುತಿರಲು

ಝುಂಪೂರ್ಣ ಝುಂಪೂರ್ಣ ಝುನ್ನಾರೆಂಬ ಶಬ್ದವ
ಇಗಡಿ ಮಾಯಿ ಕೇಳುತ್ತಲಿ
ಮಗಮುಗಿಸುವ ಹೊಸ ಶಬ್ದವಿದೆಲ್ಲಿಯದು
ಜಗಕೆಲ್ಲ ಆಶ್ಚರ್ಯ ||೧||

ಅಲ್ಲಿಂದ ಬಂದು ನಿಂದಳು ತಾನು ಹತ್ತಿರೆ
ಫುಲ್ಲಗಂಗಳ ಮಾಯಿ ತಾನು
ಚೆಲ್ವರ'ಚೆಲ್ವನೆ ಎಲ್ಲಿಂದ ಬಂದಿ ನೀನು
ಬಲ್ಲಿದ ನಿನ್ನ ಹೆಸರೇನು
ಅಲ್ಲಮಪ್ರಭುವೆಂದು ಕರೆದಾರು ಜನವೆಲ್ಲಾ
ಮಲ್ಲಿಗೆಗಂಧೆ ನೀ ಕೇಳೆ
ಇಲ್ಲದಿದ್ದರೆ ನೃತ್ಯಕ್ಕೆ ಕರೆತರಬಹುದು
ನಿಲ್ಲದೆ ಆಡಿದಳು ||೨||

ಧರೆಯೊಳಗಿಲ್ಲದ ಗತಿಗಳನಾಡುತ
ಬಿರುದಿನ ತಿರುಪಗಣ್ಣುಳ್ಳಾತ

ಬಿರುದಿನ ಹಸ್ತದಿ ನುಡಿಸುವ ಶಬ್ದವು
ಕಿರ್‍ರಕಿರ್‍ರ ಝುಣ್ಣಾರೆಂದು
ಪರಿಪರಿಯಿಂದಲಿ ನುಡಿಸಿದರೆ ಮಾಯಿಯು
ಮರುಳು ಗೊಂಡಂತೆ ಸೋತಳು
ನರೇಂದ್ರ ಮಗಿಯಗೆ ಭರದಿಂದ ಮತಿಯನ್ನು
ವರವಿತ್ತು ಸಲುಹುವಯ್ಯ ||೩||

೨

ರಾಗ: ಸಕಲಾಭರಣ, ಕರ್ನಾಟಕ ಅಡತಾಳ

ಜೋಜೋ ಎನ್ನಿ ಅಸಮ ಅಲ್ಲಮಗೆ
ಜೋಜೋ ಎನ್ನಿ ಬಸವ ಪ್ರಭುವಿಗೆ
ಜೋಜೋ ಎನ್ನಿ ಕುಶಲ ಕೋವಿದಗೆ ।ನೀವು।
ಜೋಜೋ ಎನ್ನಿ ಭಸಿತಭೂಷಣಗೆ ||ಪಲ್ಲ||

ನಿರಹಂಕಾರಿ ಸುಜ್ಞಾನಿ ಶಿಶುವಿನ ನೋಡಿ
ಗರತಿಯರು ನಾಗಮ್ಮಾ ನೀಲಮ್ಮಾ ಕೂಡಿ
ನಿರ್ವಯಲ ಪರಬ್ರಹ್ಮಗೆ ತೊಟ್ಟಿಲ ಮಾಡಿನೀವು
ಹರಸಿ ಜೋ ಎಂದು ಜೋಗುಳ ಪಾಡಿ ||೧||

ವ್ಯಸನ ಸಪ್ತವನಳಿದು ಗುಗ್ಗರಿಹಂಚಿ
ಶಶಿಧರ ಅಲ್ಲಮನೆಂದು ನಾಮವು
ಕುಶಲೆಯರು ನಿಮ್ಮ ಸದನಕ್ಕೆ ಅದ ಹಂಚಿ ||೨||

ಮಗಿಯ ನರೇಂದ್ರಗೆ ವರವಿತ್ತ ಗುರುವೆ
ಜಗದೊಳು ಜಯಜಯ ಕಲ್ಪತರುವೆ
ಬಗೆಯಿಂದ ತ್ರಿದಳಕ್ಕೆ ಬಂದುದು ಭರವೆ ನಿಮ್ಮ
ಮಗುವಿನ ದುರಿತ ದೋಷಂಗಳ ಪರಿಹರವೇ ||೩||

## ವಿಡಂಬನೆ

೧

ರಾಗ: ಸಕಲಾಭರಣ ತಾಳ: ಆದಿ

ತಮ್ಮ ಮಲಮೂತ್ರ ತಾವೆ ಸೇವಿಪರು।ಈ।
ಗ್ರಾಮದ ಜನರು
ಪಕ್ಷೀನಾಂ ಘೂಕಚಾಂಡಾಳಂ
ಗ್ರಾಮ ಚಾಂಡಾಳ ತೇರದಾಳ ||ಪಲ್ಲ||

ರಾಜಾ ಧರ್ಮರೂಪಶ್ಚ।ಪ್ರಧಾನಃ ಕಲ್ಪವೃಕ್ಷಃ
ಪರಿವಾರೊ ಕಾಮಧೇನು ಚ
ಯಥಾರಾಜಾ ತಥಾ ಪ್ರಜಾ ||೧||

ಧರ್ಮದತ್ತಿ ತಿಂಬ ನರರು
ದುರ್ಮನದಿಂದ ನರಕ [೧][ಕ್ಕಿಳಿ][೧]ವರು
ಕರ್ಮವಶದಿ ಪೋಗಿ ಬಂದು
ನಿರ್ಮಳಸುಖ ಕಾಣರವರು ||೨||

ನರೇಂದ್ರ ಮಗಿಯನು
ವಚನಾಭಿಯೊಳಗಿನ ಕ್ರಿಮಿಯಂತೆ ಬಾಳಿ ಜೀವಿಸಿ
ಪ್ರಭುವಿಗೆ ಮೊರೆಯಿಡುತಿಹನು ||೩||

## ಹನುಮಂತಸ್ತೋತ್ರ

೧

ರಾಗ: ಕನ್ನಡ ಕಾಂಬೋಧಿ ತಾಳ: ಏಕತಾಳ

ಮುಖ್ಯ ಪ್ರಾಣನಾಥನೆ, ಕಾಮದೇವನೀತನೆ
ಏಕನಿಷ್ಠ ರಾಮಸೇವೆ ಮಾಡಿ ಮುಕ್ತಿಗೆ ಪೋದನೆ ||ಪಲ್ಲ||

---

೧-೧ x (ಮೂ)

ವಾಯುಕುಮಾರನೆ ರಣರಂಗಧೀರನೆ
ಏಕಾಂಗ ಶೂರನೆ ದೈತ್ಯಸಂಹಾರನೆ ॥೧॥

ಬಲೆಯೊಳಗಾಗನೆ ನುಸುಳಿಯಾಚೆಗೆ ಜಾರನೆ
ಬಾಲಕೆ ಪಂಜು ಕಟ್ಟಿದರೆ ಲಂಕಾದಹನ ಮಾಡಿದನೆ ॥೨॥

ನಂದೀಶ್ವರ ವಾಸನೆ ಭೀಮಸರ್ವೇಶನೆ
ಕಂಡ ನರೇಂದ್ರ ಮಗಿಯಗೆ ಕರುಣವಿಟ್ಟ ದೇವನೆ ॥೩॥

## ಪ್ರಾರ್ಥನೆ ಮತ್ತು ಸ್ತುತಿರೂಪದ ಸ್ವರವಚನಗಳು

೧

ರಾಗ: ಭಿಬಾಸ, ತ್ರಿವಿಡಿ

ನಂಬಿದೆ ನಾ ನಿಮ್ಮ ನಿಜಗುಣ ಭದ್ರ
ಕಂಬುಕಂಧರರಾಯ ಕರುಣಾಸಮುದ್ರ ||ಪಲ್ಲ||

ಬಲುಬಾಧೆಯೊಳು ಸಿಲ್ಕಿ ಬಹುನೊಂದೆ ನಾ ನಿಮ್ಮ
ಹಲವು ಹಂಬಲಿಪೆ ನಾ ಫಲವ ತೋರಯ್ಯ ||೧||

ಸಜ್ಜನ ಶರಣರ ಮುಖಸರಸಿಜಭೃಂಗ
ದುರ್ಜನ ದುರುಳರ ಮಾಯಮದ ವಿಭಂಗ ||೨||

ನೆಲೆಗಾಣೆ ನಿರ್ವಾಣ ನಿಮ್ಮ ಕೀರ್ತಿಯನು
ಸಲೆ ಪೊಗಳುವೆ ಸ್ವಾಮಿ ಸಂಶಯವೇನು ||೩||

ಪ್ರಜ್ವಲಿಸಿತು ಪ್ರಭೆ ಪುಣ್ಯದ ಮಲ್ನಾಡ
ನಿಜ ಭಾಪುರೆ ಮೊಗೆ ಅಲ್ಲಮ ಪ್ರಭುಲಿಂಗ ||೪||

ತೇರದಾಳ ವಾಸ ತ್ರಿಭುವನಕೆ ಕೈಲಾಸ
ಓರಂತೆ ಭಜಿಪ ಭಕ್ತರೊಳು ವಿಲಾಸ ||೫||

ಶ್ರೀ ನರವರ ಗುರುಬಸವನ ಪ್ರಾಣೇಶ
ತಾರಕಬ್ರಹ್ಮ ತ್ರಿಣಿ ಅಲ್ಲಮೇಶ ||೬||

೨

ಬಲ್ಲಿದನೆಂದು ನಿಮ್ಮ ಮೊರೆಯ ಪೊಗಲು ಶಿವನೇ
ಬಲ್ಲವನಲ್ಲ ನೋಡು ರುದ್ರ ಮಹಾರುದ್ರನೆ ||ಪಲ್ಲ||

ಒಲಿದು ನೋಡಿ ಸಲಹು ಎನ್ನ ಸುಲಭರಾಯನೆ
ಬಲವ ತರಿಸು ಭಾಳನೇತ್ರ ಕಿರಿಯರೊಡೆಯನೆ ||೧||

ಬಲಿ[೧][ದ][೧] ಲಿಂಗನ ಬಸವಲಿಂಗನ ಚರರಣ ಪಿಡಿದನೆ
ಒಲಿದು ನಿಂದ ದಿವ್ಯಲಿಂಗ[೨][ಭವ್ಯ][೨] ಲಿಂಗನೆ ||೨||

ಸ್ಥಿರಪದವಾದ ಬಳಿಕ ನಿನ್ನ ಮರೆವೆನೆ, ಅದ
ನರಿದು ಮೋಹ ಹಾಕಿ ಮದವ ಮುರಿದನೆ ||೩||

ಅಧಿಕಾರಿಯಾದ ಸ್ವಾಮಿ ನೀನು ಚದುರ ಲಿಂಗನೆ
ಚದುರಲಿಂಗನೆ ಮೂರುಪುರ [೩][ಗಿರಿವಜ್ರನೆ][೩] ||೪||

ತರಳ ಕೈಯಕೆ ಮರುಳಲಿಂಗನೆ ಕಾಲಕಂಠನೆ
ಕರಸ್ಥಲದಿ [೪][ಪಿಡಿದು ನಿಂದ][೪] ಗಿರಿಜೆಯೊಡೆಯನೆ ||೫||

ಸ್ಥಿರವಾಗಿ ಉತ್ಸಾಹವೀವ ನೆಲೆಯವಂತನೆ
ಕರುಣಿ ವರವಕೊಟ್ಟ ಗುರು ಬಸವಲಿಂಗನೆ ||೬||

೩

ಏನು ಹೇಳ್ವೆ ನಿರಾಳವಾದ ಘಸಕಿ ಅಲ್ಲಮಾ
ನೀವು ನಮಗೆ ನಿಜವ ತೋರನಿಮಿಷಲ್ಲಮಾ ||೧||

---

೧-೧ ವ(ಮೂ); ೨-೨ ದಿವ್ಯ (ಮೂ)
೩-೩ ಹ ಗಿರಿಜರುದ್ರನೆ (ಮೂ); ೪-೪ ಎಂದ ಪಿಡಿದು (ಮೂ)

[೧][ಮ][೧]ಗಿಯ ಬೆತ್ತ [೧][ಮ][೧]ಗಿಯ ಬಣ್ಣ ಭಾಪು ಅಲ್ಲಮಾ
ರಸಿಕಳಾದ ರಮಣಿಯೊಳಗೆ ರುದ್ರನಲ್ಲಮಾ ||೨||

ಸೊಗಸು ಸೊಂಪು ಸುಗುಣ ಸುಗುಣ ಸುಗುಣ ಅಲ್ಲಮಾ
ಮುಸುಕು ತೆಗೆದು ಮುಖವ ನೋಡಿ ಮೋಹಿ ಅಲ್ಲಮಾ ||೩||

ಕಾಮಕಾಲಹರಣನಾದ ತ್ರೀಣೆ ಅಲ್ಲಮಾ
ಸೊಗಸಿ ಸರ್ವ ಸ್ವರಿಸಯ್ಯ ಶರಣು ಅಲ್ಲಮಾ ||೪||

ಮಾಯೆ ಬಯಲು ಮಾಡಿ ಬೇಡಿಕೊಂಬೆನಲ್ಲಮಾ
ಮಮತೆಯೆಂಬ ಮುದ್ರೆ ಮುದ್ರೆ ಮುದ್ರೆ ಅಲ್ಲಮಾ ||೫||

ಅರಳಿಗರಳ ಅಂಕರಂಕರಿಸು ಅಲ್ಲಮಾ
ಪರಿಮಳವನು ಪೂಸಿ ಪ್ರೇಮ ಭಕ್ತಿ ಅಲ್ಲಮಾ ||೬||

ಗುರುಬಸವನಂತರಂಗ ಗೋಪ್ಯ ಅಲ್ಲಮಾ
ಸೊಗಸಿ ಸರ್ವಕಾಲವಿಡಿದು ಶಾಂತ ಅಲ್ಲಮಾ ||೭||

೪

ರಾಗ: ದೇಶಿ, ತಾಳ: ಝಂಪಾ

"ಬೂದಿಯಾ ಮೈಯೊಳು ವೇದವನೋದುತ
ಹಾದಿಲೆ ಬರುವ ಈತನ್ಯಾರೆ"
"ವೇದದಾಯಕ ಕಾಣೆ ಯತಿರಾಯ ಅವ ನಮ್ಮ
ಬೋಧದಲ್ಲಮ ಪ್ರಭುರಾಯನೆ" ||ಪಲ್ಲ||

"ಮುತ್ತೈದೆಯರ ಕೈ ಮುತ್ತಿನಾರುತಿ
ಎತ್ತಿಸಿಕೊಳ್ಳುವ ಈತನ್ಯಾರೆ"
"ಚಿತ್ತದೊಲ್ಲಭ ಕಾಣೆ ಚಿನ್ಮಯ ಅವ ನಮ್ಮ
ಮುತ್ಯಾ ಮುಕ್ಕಣ್ಣ ಪ್ರಭುರಾಯನೆ" ||೧||

"ಹಿಡಿದರೆ ಬಿಡೆನೆಂಬ ಬಿಟ್ಟು ಹಿಡಿಯದ ಪಂಥ
ಮಡದಿ, ಮನ್ಮಥದೂರನ್ಯಾರೆ"

೧-೧ ಬ (ಮೂ)

"ಪೊಡವಿ ಈರೇಳು ತನ್ನೊಡಲೊಳಿಂಬಿಟ್ಟ
ಮೃಡನು ಅಲ್ಲಮ ಪ್ರಭುರಾಯನೆ" ||೨||

"ನಾಯಕರತ್ನ ರವಿಪತಿ ಶಂಕರ ದಾಯಕೆ ಸಿಲುಕನಾರೆ"
"ಕಾಯದ ಕರ್ಮವ ಕಿತ್ತು ಈಡ್ಯಾಡುವ
ನಾಯಕ ಅಲ್ಲಮ ಪ್ರಭುರಾಯ" ||೩||

"ಚೋಳಗೆ ಹೊನ್ನ ಮಳಗರೆಯುತ, ಮನೆಯೊಳು
ಆಳಾಗಿ ನಿಂತವನ್ಯಾರೆ"
"ಬಾಳುವ ಭಕ್ತರ ಬಗೆಯಿಂದ ಸಲಹುವ
ಲೋಲ ಮಗೆಯ ಪ್ರಭುರಾಯನೆ" ||೪||

"ಮುಡಿಯೊಳು ಜಾಜಿಯ ತಾವರೆ ಮೊಗ್ಗೆಯ
ತಡೆಯದೆ ಧರಿಸಿದನ್ಯಾರೆ"
"ಬಿಡ ಎನ್ನೊಡೆಯ ಗುರುಬಸವ ಸಲಹುವ ಎ
ನ್ನೊಡೆಯ ಮಗಿಯ ಪ್ರಭುರಾಯನೆ" ||೫||

೫೭

ರಾಗ: ಗೌರಿ

ನಿಗಮಗೋಚರ ನಿತ್ಯನೆ ಅಲ್ಲಮ ಪ್ರಭು ||ಪಲ್ಲ||

ಪರಹಿತ ಪರಮಾತ್ಮ ಪರಮವಿರಕ್ತನೆ
ಶರಣರ ಮನಃಪ್ರಿಯ ಶಿವಯೋಗಿ ಅಲ್ಲಮಪ್ರಭು ||೧||

ಕಾಮನ ಮದಭಂಗ ಕಾಲಸಂಹರನೆ
ಭಾವಭರಿತದೇವ ಭವದೂರನೆ ಅಲ್ಲಯ್ಯ ||೨||

ಕರವಿಡಿದನು, ಕವಿ ಗುರುಬಸವನ ಎನ್ನೊಡೆಯ
ಚರಲಿಂಗ ಮೂರುತಿ ಮಗಿಯ ಅಲ್ಲಮ ಪ್ರಭುರಾಯನೆ ||೩||

೬

ರಾಗ: ಶ್ರೀರಾಗ

ಬಲ್ಲರ್ಯಾರೊ ಅಲ್ಲಯ್ಯ ನಿಮ್ಮ ಭೇದನ ||ಪಲ್ಲ||

ದಂಡನಾಯಕಬಲ್ಲ ದಾಳಿಯಿಟ್ಟವಬಲ್ಲ
ಕೊಂಡೆ ಮಂಚಣ್ಣ ಕನ್ನಪ್ಪ ಬಲ್ಲ
ಇಂಡಿಯ ಶಾಂತನು ಬಲ್ಲ ಏಕಾಂತಯ್ಯನು ಬಲ್ಲ
ಚಂಡ ಪ್ರಕಾಶ ಚಿನ್ಮಯನು ಬಲ್ಲ ||೧||

ಮಾದಿರಾಜನು ಬಲ್ಲ ಮೃದುನ ರಾಮಯ್ಯ ಬಲ್ಲ
ಆದಿಮಯ್ಯನು ಬಲ್ಲ ಅನುಮಿಷಯ್ಯನು ಬಲ್ಲ
ವೇದ ಮುಖನು ಬಲ್ಲ ವೀರಸಂಗಯ್ಯ ಬಲ್ಲ
ಮೂದೇವರೊಡೆಯ ಮಹೇಶ ಬಲ್ಲ ||೨||

ಬಲ್ಲಾಳನು ಬಲ್ಲ ಬಲ್ಲುಲಿಹೊಯ್ವವ ಬಲ್ಲ
ಗೊಲ್ಲಾಳರಾಮಬಲ್ಲ ಗುರುಬಸವನ ಪ್ರಾಣ
ದೊಲ್ಲಭ ಮಗೆ ಪ್ರಭುರಾಯನೆಂದನು ||೩||

೭

ಪ್ರಭುದೇವ ಬಂದನಮ್ಮಾ
ಪಾವನ ಮಾಡುತ ಅಂಬುಜಮಿತ್ರನ
ಕೋಟಿ ತೇಜ ಪ್ರಕಾಶದಿ
ಅನಪಮ ಬಂದನಮ್ಮಾ ||ಪಲ್ಲ||

ನಿರುಪಮ ಬಂದನಮ್ಮಾ ನಿರಾಲಂಬ ನಿರ್ವಾಣ ಬಂದನಮ್ಮಾ
ಕರುಣ ಸಾಗರ ಬಂದ, ಕೃಪಾನೇತ್ರನು ಬಂದ
ಕಾಮಾರಿ ಬಂದನಮ್ಮಾ ||೧||

ಗುರುರಾಯ ಬಂದನಮ್ಮಾ ಗಂಭೀರದ ಗುಣಮಣಿ ಬಂದನಮ್ಮಾ
ಪರಮಪಾವನ ಬಂದ ಪರುಷದ ಖಣಿ ಬಂದ
ಸಿರಿವಂತ ಬಂದನಮ್ಮಾ ||೨||

ಚನ್ನಿಗ ಬಂದನಮ್ಮಾ ಚಂದ್ರನಸೂಡಿ ಚರಲಿಂಗ ಬಂದನಮ್ಮಾ
ಪನ್ನಂಗಧರ ಬಂದ ಫಲದಾಯಕ ಬಂದ ವ್ರತವ
ತೋರಿಸ ಬಂದನಮ್ಮಾ ||೩||

ನನ್ನಯ್ಯ ಬಂದನಮ್ಮಾ ನಿಜವ ನೋಡಲೀತ ಬಂದನಮ್ಮಾ
ಬಿನ್ನಾಣ ಬಂದ ಭೇದಿಸ ಬಂದ ಭುವನಕೆ
ಚನ್ನಿಗ ಬಂದನಮ್ಮಾ ||೪||

ಸೊಲ್ಲಲು ಬಂದನಮ್ಮಾ ಸೊಲ್ಲಲೆಂದು ಶೋಭನನು ಬಂದನಮ್ಮಾ
ಬಿಲ್ವಪತ್ರಿಗೆ ಬೇಗನೆದ್ದ ಮಗಿಯ ಪ್ರಭು
ಅಲ್ಲಯ್ಯ ಬಂದನಮ್ಮಾ ||೫||

ನಿಲ್ಲದೆ ಬಂದನಮ್ಮಾ ನಿಜವ ನೋಡೆನುತೆನುವವನೆ ಬಂದನಮ್ಮಾ
ಒಲುಮೆಯಯ್ಯನು ಬಂದ ಕವಿ ಗುರುಬಸವನ
ವಲ್ಲಭ ಬಂದನಮ್ಮಾ ||೬||

## ನೀತಿ-ಬೋಧಾ ರೂಪದ ಸ್ವರವಚನಗಳು

೧

ರಾಗ: ದೇಸ, ತಾಳ: ಝಂಪಾ

ಮಗಿಯ ಪ್ರಭುವಿನ ನೆನೆದು ಮುಕ್ತನಾಗೆಲೊ ಮನವೆ
ಬಗಡ ದೈವವ ನಂಬಿ ನೀ ಬಂಡಾಗಬೇಡ ||ಪಲ್ಲ||

ಮಾರಿ ಮಸಣಿಯು ಮೈಲಾರ, ಕನ್ನೆಯರು ಜಕ್ಕಿ
ಚೋರತನದಲಿ ಮೆರೆವ ಮುಂಗೂಟನಲ್ಲಿ
ಸೇರಿಕೊಂಡಿಹ ಚವಡಿ ಚಾಮುಂಡಿ ಚಂಡಿಗಳು
ಭೂರಿ ದೈವವ ನಂಬಿ ನೀ ಗಾರಾಗಬೇಡ ||೧||

ಮುಚ್ಚುಮರೆಯಲಿ ಮುನ್ನೂರು ದೈವವ ನಂಬಿ

ಹೆಚ್ಚೆಂದು ಮನದೊಳಗೆ ನೀ ಹಿಗ್ಯಾಡಬೇಡ
ನಿಶ್ಚಿಂತ ನಿರ್ವಾಣ ನಿರುಪಮನು ರಕ್ಷಿಸುವ
ನುಚ್ಚು ದೈವವ ನಂಬಿನೀ ಹುಚ್ಚಾಗಬೇಡ ||೨||

ಬೇಡಿದಿಷ್ಟಾರ್ಥವನು ಬೇಗ ಕೊಡು ೧[ವನು]೧ ಗುರುಬಸವಗತಿ
ನೀಡುವನು ಮನ ಹರುಷದಲಿ ನಿತ್ಯ ನಿಜವಾಗಿ
ಗಾಡಿಕಾರನಗೆದ್ದು, ಮಗಿಯ ಪ್ರಭುವನು ಬಿಟ್ಟು
ನಾಡದೈವವ ನಂಬಿ ನೀ ಹೆಡ್ಡಾಗಬೇಡ ||೩||

೨

ರಾಗ: ದೇಶ, ತಾಳ: ಝಂಪಾ

ನಂಬು ಮಾನವ ನಿಜ ಜೂಟಯತಿಗೆ ಅಪ್ರತಿ ಮಹಾ
ಸಾಂಬಸದಾಶಿವನಲ್ಲವೆ, ದೇಹಿ ||ಪಲ್ಲ||

ಸೃಷ್ಟಿಯೊಳಗೆ ತೀರ್ಥಯಾತ್ರೆ
ಕಷ್ಟಪಟ್ಟು ಬಳಲೂದೇಕೆ
ಅಷ್ಟಕೋಟಿ ಗಂಗೆಗಳು ಅಂ
ಗುಷ್ಟದಲ್ಲಿ ತೋರುತಿವೆ ||೧||

ಕಂಡ ೧[ಕಂಡ]೧ ಶಾಸ್ತ್ರವ ನೋಡಿಯೋದಿ
ಹಿಂಡು ದೈವವ ಭಜಿಸಿ ಭಜಿಸಿ
ಭಂಡನಾಗಬೇಡ ಮಾನವಾ ಅ-
ಖಂಡ ಪುರುಷ ||೨||

ಇಹಪರ ಎರಡು ಸಾಧ್ಯವು
ಮಹಾ ಗುರುಬಸವನ ಪ್ರಾಣನಾಥನ ಮರೆಯದಿರೆ
ಮಹಿಗೆ ಪಂಚಾಕ್ಷರಿಯ ಮಂತ್ರವು ||೩||

೧-೧ x (ಮೂ)

೩

ರಾಗ: ಶಂಕರಾಭರಣ, ತಾಳ: ಆದಿ

ಬಲ್ಲವರೊಡನಾಡಬೇಕೊ, ಬಾಹ್ಯರಂಗವ ಬಿಟ್ಟಿರಲು ಬೇಕೋ
ಸೊಲ್ಲಿನಿಂದಲಿ ಶ್ರೀ ಪ್ರಭುರಾಯನ ಸೊಬಗಿನೊಳಿರಲು ಬೇಕೋ
ಏ ಮನವೆ ||ಪಲ್ಲ||

ಮತ್ಸರ ದೂಡಲಿಬೇಕೊ, ಮದಗಜವನು ಕೀಳಲಿಬೇಕೊ
ಉಚ್ಚಾಟನಾಗಿ ನಿರ್ವಯಲ ಸಾಧಿಸಬೇಕೊ
ನಿರ್ಲಜ್ಜನಾಗಬೇಕೊ ಏ ಮನವೆ ||೧||

ಹೆಚ್ಚನಾಡದಿರಬೇಕೊ ಹೆಮ್ಮೆಯ ಜರಿಯಲುಬೇಕೊ
೧[ಎಚ್ಚರ ]೧ವಿರಬೇಕೊ ಎದಿಯ ಪ್ರ
ಪಂಚದ ಇಂಗಿತವನರಿಯಬೇಕೋ ||೨||

ಕತ್ತಲಲಿ ಜ್ಯೋತಿಯ ಕಾಣಬೇಕೋ ಅದ ಕಂಡರೆ ಕಾಣದಂತಿರಬೇಕೋ
ಸತ್ತ ಹೆಣ್ಣನೆಬ್ಬಿಸಿ ನುಡಿಯಲು ಬೇಕೊ
ಸರಸವನಾಡಲುಬೇಕೋ ಏ ಮನವೆ ||೩||

ಧರ್ಮವ ಹಿಡಿಯಲು ಬೇಕೊ ದಾನ ಸುಪಾತ್ರಕೆ ನೀಡಲು ಬೇಕೋ
ಬೊಮ್ಮದ ಹೊಲಬನು ಬಂಧಿಸಿ, ಬಲು ದೃಷ್ಟಿಭೇದಿಸಿ
ನೋಡಲಿಬೇಕೋ ಏ ಮನವೆ ||೪||

ಕರ್ಮವ ಖಂಡಿಸಲು ಬೇಕೋ ಕಾಡುವ ಕಪಿಯನು ಕೊಲಬೇಕೋ
ಗಮ್ಮನೆ ಗರುಡನಂದದಿ ಗಮನಿಸಲು ಬೇಕೊ
ಗುರುಧ್ಯಾನವಿರಲು ಬೇಕೋ ಏ ಮನವೆ ||೫||

ಭೃತ್ಯವ ಮುರಿಯಲಿ ಬೇಕೊ
ಮತ್ತೆ ಕವಿಗುಣಮಣಿ ಗುರುಬಸವನ ಪ್ರಾಣ
ಚಿತ್ತದೊಲ್ಲಭ ಮೊಗ್ಗಿ ಅಲ್ಲಮ ಪ್ರಭುವಿನ,
ಚಿಂತೆಯೊಳಿರಬೇಕು ಏ ಮನವೆ ||೬||

---

೧-೧ x (ಮೂ)

೪

ರಾಗ: ಕನ್ನಡಕಾಂಬೋದಿ

ಅಲ್ಲಮಮಂತ್ರವ ಜಪಿಸಿರಿ ಆವಾಗಲು
ಬಲ್ಲಿದವ [೧][ರೆಲ್ಲರು][೧] ಭಕ್ತಿವಲ್ಲಭ ಮಗಿಯದೇವ ಅಲ್ಲಮ॥ಪಲ್ಲ॥

ಅಷ್ಟಮದಕರಿ [೨][ಎಂಬಿವ][೨] ಮೆಟ್ಟಿ ಸೀಳುವ ಮಂತ್ರ
ಕಷ್ಟದಾರಿದ್ರ್ಯವ ಕೆಡಿಸುವ ಮಂತ್ರ
ಹುಟ್ಟು ಹೊಂದೆಂಬುವೆರಡನಿಟ್ಟೊರಸುವ ಮಂತ್ರ
ಅಷ್ಟದಿಕ್ಪಾಲಕರು ಮನಮುಟ್ಟಿ ಓದು ಮಂತ್ರ ॥೧॥

ಕರ್ಮಸಾಗರವನ್ನು ಕಡೆದಾಟಿಸುವ ಮಂತ್ರ
ದುರ್ಮತಿಯ [೩][ದ][೩]ನೋಡಿಸಿ ದಾಟಿಸುವ ಮಂತ್ರ
ಮರ್ಮವಿಡಿದು ಧ್ಯಾನಿಸಲು [೪][ಒಲೆದೀವ][೪] ಮಂತ್ರ
ಧರ್ಮಸದನದೊರೆಯರ ಛತ್ರಪತಿಮಂತ್ರ ॥೨॥

ಧರೆಯೊಳಧಿಕವಾದ ಘನಪ್ರಭೆಮಂತ್ರ
ಸುರಮನುಮುನಿಗಳಿಗೆ ಸಿದ್ಧಮಂತ್ರ
ಗುರುಬಸವಗೆ ಘನಪದವೀವ ಮಂತ್ರ
ಪುರ ತೇರದಾಳ ಪ್ರಭುರಾಯ ಸದಾಶಿವ ಮಂತ್ರ ॥೩॥

೫

ಭಿನ್ನವಿಲ್ಲದ ಬೆನಕವಾದ ತರಳ ಜೀವವೆ
ನೀವು [೫][ನಿ][೫]ಮಗೆ ಘನವಾಗೆ ವ್ಯರ್ಥಜೀವವೆ ॥೧॥

[೬][ಅಂದ][೬]ದಿಂದ ಕಳೆಯಲೇಕೆ ಅಲ್ಪ ಜೀವವೆ?
ಅಂದಿಗೇಕೆಯಸ[೭][ಮ][೭] ಮಾತು ಹೇಸಿ ಜೀವವೆ ॥೨॥

ಮುಂದರಿಯದೆ ಕೆಡಲುಬೇಡ ಮೂರ್ಖಜೀವವೆ
ತಂದೆ ಶ್ರೀ ಪ್ರಭುವ ನೆನೆಯ ತರಳ ಜೀವವೆ ॥೩॥

---

೧-೧ ರಲ್ಲವೆ (ಮೂ); ೨-೨ ಎಂಬ (ಮೂ)
೩-೩ X (ಮೂ); ೪-೪ ಒಲುದೀಯ (ಮೂ)
೫-೫ ನ(ಮೂ); ೬-೬ ಅದಕ(ಮೂ); ೭-೭ ಸು (ಮೂ)

ಹೇಳಿದ ಮಾತ ಕೇಳನೆಂದು ಹೇಳು ಜೀವವೆ
ಬಾಲಿಗೊಲಿದು ಮಾಯಿಗೊಲಿದು ಬಣ್ಣಿ ಜೀವವೆ ||೪||

ಆಳು ಮುನಿದು ಅರಸುಕೆಡದು ಕೇಳು ಜೀವವೆ
ಭಾಳನೇತ್ರನ ಭಜಿಸು ಭಜಿಸು ಬಣ್ಣಿ ಜೀವವೆ ||೫||

ಭಜಿಸು ಧ್ಯಾನ ಭಜಿಸು ಧ್ಯಾನ ಮಹಾಜೀವವೆ
ಒಡಂಬಡಿಸಿ ತೋರಿದನಲ್ಲ ಗೋಪ್ಯ ಜೀವವೆ ||೬||

ಬರಡ ಹಯನ ಮಾಡಿಕೊಟ್ಟನು ಭಜಿಸು ಜೀವವೆ
ಗುರುತಮಾಡಿ ಪ್ರಭುವ ನೆನೆಯ ತರಳ ಜೀವವೆ ||೭||

## ಇತರ ಸ್ವರವಚನಗಳು

೧

ರಾಗ: ಸಕಲಾಭರಣ, ಕರ್ನಾಟಕ ಅಡತಾಳ

ಜೋ ಜೋ ಎನ್ನಿ ಮಹಾಜನ್ಮಕೆ ಬಂದು
ನಿತ್ಯನಿರಂಜನ ಪ್ರಭುಲಿಂಗವೆಂದು
ಸಾರಿ ಹೇಳಿದ ಮಾತು ಮನಸಿಗೆ ತಂದು
'ಪ್ರಣಮ' ಬೀಜಮಂತ್ರವ ಪಾಡಿರೆಂದು ||೧||

ಏನೂ ಇಲ್ಲದಂದು ತಾನಾದ ಶಿವನು
ಪ್ರಣಮ ಉದ್ಭವಿಸಿ ಕಂದನಾದನು
ಪ್ರಾಣಲಿಂಗನೆಂದು ಪೆಸರ ಪಡೆದನ ನಿಜ
ಜ್ಞಾನದಿಂದ ಲೀಲೆಯಾಡಿದನು ||೨||

ಬಣ್ಣದ ತೊಟ್ಟಿಲ ಹೃದಯಕಮಲದೊಳಗೆ
ಹನ್ನೆರಡೆಸಳಿನ ಹಾಸಿಗೆ ಮೇಲೆ
ಚೆನ್ನ ಮಹಾಲಿಂಗನ ಮಲಗಿಸಿ ಮೇಲೆ ಬೇಗ ನೀವು
ಕನ್ಯಾಮುತ್ತೈದೆಯರು ತೂಗಿರಿ ಈಗ ||೩||

ಅಷ್ಟಾವರಣದ ಶೆಲ್ಲೆಯನುಟ್ಟು
ನಿಷ್ಠೆ ಪಂಚಾಚಾರ ಕುಪ್ಪಸ ತೊಟ್ಟು
ಶ್ರೇಷ್ಠ ಷಟ್‌ಸ್ಥಲದ ವಸ್ತ್ರಗಳಿಟ್ಟು ನೀವು
ಇಷ್ಟಲಿಂಗನ ತೂಗಿಹಚ್ಚಿರೆ ಬಟ್ಟು ||೪||

ಆರು ಮೂರುಲಿಂಗ ನವರತ್ನ ಮಾಲೆ
ಪರಶಿವ ತತ್ವಪದಕ ಕೊರಳಲ್ಲಿ
ಧೀರ-ಗಂಭೀರವೆರಡು ಕಡಗ ಬಿಂದಲಿ ಇನ್ನೂ
ಇನ್ನೂರ ಹದಿನಾರು ಮುತ್ತಿನ ಹರಳೆಲೆ ||೫||

ಸಾಕ್ಷಾತ್ ಸದ್ಗುರು ತಾಯಿ ಹಸ್ತದಲಿ
ಮೋಕ್ಷ ಗುಗ್ಗುರಿ ಹಂಚಿದಳು ಕೊಡುತ್ತಲೆ
ಅಕ್ಷತೆ ಕಡಬು ಇಕ್ಕಿದಳು ಮಡಿಲಲಿ ನಮ್ಮ
ಪಕ್ಷುಳ್ಳ ನೆಂಟರ ಕರಿಸಿರಿ ಈಗ ||೬||

ನಾಲ್ಕು ಐದು ಹತ್ತು ಹನ್ನೆರಡು ಹದಿನಾರು
ನಿಲ್ಕಡಿಯುಳ್ಳವರು ಇಬ್ಬರಿಬ್ಬರು
ಮೇಲ್ಕಡೆ ಕರೆವರು ಹತ್ತು ಗರತಿಯರು ಬೇಗ
ಮೇಲೆ ಕರೆತನ್ನಿರಿ ಬಾಗಿಣದವರ ಜೋ ಜೋ ||೭||

ತೊಟ್ಟಿಲವಿಪ್ಪುದು ಅಂತಃಸ್ಥಾನದಲಿ
ತುಟ್ಟತುದಿಯ ಭ್ರೂಮಧ್ಯ ಸ್ಥಾನದಲಿ
ಕಟ್ಟಿದ ಉನ್ಮನಿ ಪವನಸ್ಥಾನದಲಿ ನೀವು
ದಿಟ್ಟಿಸಿ ತೂಗಿರೆ ಚಿತ್ತ ಹಸ್ತದಲಿ ||೮||

ತಾನೇ ತೊಟ್ಟಿಲನಾಗಿ ತಾನೆ ಮಲಗಿದಾ
ತನ್ನ ಕೈಯಲಿ ತೂಗಿ ನಿದ್ರಸ್ಥನಾದಾ
ತಾನೇ ಎಚ್ಚರಾಗಿ ಎದ್ದು ಕುಳಿತಿದ್ದಾ
ಪ್ರಭು ನಿರಂಜನ ಸ್ವಾಮಿ
ತಾನೇ ವಿನೋದಾ ||೯||

೨

ತಾಳ: ದಾದರಾ

ಏನ ಹೇಳಲಿ ಅಂದು ಉಚ್ಚವ ಸಾಗಿದೆ ಶಾಂತ ಪ್ರಭುವೆ
ಮಹಾ ಆನಂದವಾಗಿಹ ಮನದೊಳು ಸುಲಭ ಶಾಂತ ಪ್ರಭುವೆ ||೧||

ಹೊತ್ತಿದ ಸೂರಿಯಪಾನ ನಂದಿಯಧ್ವಜ ಶಾಂತಪ್ರಭುವೆ
ಉತ್ತಮ ಧೂಪದ ಸಂಗ ಗುಗ್ಗುಳ ಕಂಪು ಶಾಂತ ಪ್ರಭುವೆ ||೨||

ಎಡ ಬಲ ಓಂಕಾರ ಯತಿಗಳನೇಕರೊಳು ಶಾಂತ ಪ್ರಭುವೆ
ಗುರುಭಕ್ತಿ ತೇಜದೊಳೆಸವ ದಂಡಿಗೆಯು ಶಾಂತ ಪ್ರಭುವೆ ||೩||

ಮುದವೆತ್ತಿ ಜಡಿವಭೇರಿ [೧][ಕು][೧] ಡಮು ನಿಗಳವು ಶಾಂತ ಪ್ರಭುವೆ
ಸಡಗರದಿಂದ ಭೋರಿಡುವ ಸಂಪೂರ್ಣವು ಶಾಂತಪ್ರಭುವೆ ||೪||

ಜೋಡು ಮೃದಂಗವು ದಂಡಿಗೆ ವೇಣು ತಾಳವು ಶಾಂತ ಪ್ರಭುವೆ
ಹಾಡುವ ಭಕ್ತ ಸುರಗಾನ ಸ್ವರಯತ್ತಿ ಶಾಂತ ಪ್ರಭುವೆ ||೫||

ಆಡುವ ಪಾತ್ರವು ನೋಡುವ ಪುರಜನ ಶಾಂತಪ್ರಭುವೆ
ಬೇಡುವ ಮುಕ್ತಿ ಕೊಂಡಾಡುವ ಸ್ತುತಿಗಳು ಶಾಂತ ಪ್ರಭುವೆ ||೬||

ಮುಪ್ಪುರಹರ ಜಯಜಯವೆಂದು ಹರಸುತ ಶಾಂತ ಪ್ರಭುವೆ
ಸುಪ್ಪಾಣಿಯಿಂದಾಳು ಸೊಗಸು ವಿಲಾಸದಿ ಶಾಂತ ಪ್ರಭುವೆ ||೭||

ಕರ್ಪೂರವೆತ್ತಾರು ಸಂದೇಹನರಿಯರು ಶಾಂತ ಪ್ರಭುವೆ
ಒಪ್ಪುವ ವಡಬಾಗ್ನಿ ಮಂಗಳ ಉಘೇಯೆಂದು ಶಾಂತಪ್ರಭುವೆ ||೮||

ಪ್ರಳಯಕ್ಕೆ ನಿಲ್ಕದ ತ್ರಿದಳಸ್ಥಳ ಸಂದ ಶಾಂತ ಪ್ರಭುವೆ
ನಳಿನಗೋಲನ ಸುಟ್ಟು ನಗುತಭಸಿತವನಿಟ್ಟ ಶಾಂತಪ್ರಭುವೆ ||೯||

ಕವಿ ನನ್ನ ಕವಿ ಗುರುಬಸವಗೋಲನ ಹಿತ ಶಾಂತಪ್ರಭುವೆ
ನಮ್ಮೊಳು ಸುಳಿವ ಪಾವನ ಮೂರ್ತಿ ಸೊಬಗು ಇನ್ನೇನೆಂಬೆ
ಶಾಂತ ಪ್ರಭುವೆ ||೧೦||

---

೧-೧ ತು (ಮೂ)

೩

ರಾಗ: ಸಾರಂಗ, ತಾಳ: ಆಟತಾಳ

ಮಂಗಳಾರತಿ ತಂದೆತ್ತಿರೆ ಮೊಗೆಯ ಲಿಂಗ ನಿರ್ಮಾಯ
ಜಂಗಮರಾಯಗೆ ಕಂಗಳಪ್ರಿಯಗೆ
ತಿಂಗಳ ಜಯಗೆ ಮಂಗಳಾರತಿಯ ತಂದೆತ್ತಿರೆ ||ಪಲ್ಲ||

ಸುಗಂಧ ದಶಗಂಧ ಇಂದು ತೊಟ್ಟಿಲನಿಟ್ಟು
ರಸವಾರ ನೀಲ ಕಂಚನಿ ತೊಟ್ಟು
ಭಸಿತ ನೀಲಕಹಾರ ಬಲಿತ ಬಾಲನಧೀರ
ರಸಿಕ ನಿನ್ನೊಡೆಯರರಸರೇಳುತ ||೧||

ಸೂಡನ್ನರಸಾನ್ನ ಸಲೆ ಸಂತೋಷದನಿಗೆ
ಮಾಡಿ ಬೇಡಿದ ಫಲ ನೂರನು ನೀಡಿ ಪಡೆದ ಭಕ್ತಿ
ಬೇಡು ಸಜ್ಜನಮುಕ್ತಿ
ಕೂಡಿಕೊಂಡನು ಮೊಗ್ಗೆ ಚನ್ನಪ್ರಭುಪಾಲ
ರನ್ನ ಸುರರು ಕೂಡಿ ರನ್ನನಿಗೆ
ಪ್ರಭುಡಗಾರತಿಯ ತಂದೆತ್ತಿರೆ ||೨||

ಮಂಗಳ ತಿಂಗಳ ತುಂಗಕೃಪಾಂಗಗೆ
ಮಂಗಳ ಅಂಗಜಭಂಗನಿಗೆ
ಮಂಗಳ ಮಹಿಮ ಸಂಗನಿರಾಪಗೆ
ಮಂಗಳ ಅಲ್ಲಯ್ಯ ತಿಂಗಳಿಗೆ ||೩||

ನಿರವಯ ನಿರವಯ ನಿರವಯನಾಥಗೆ
ನಿರುಪಮ ನಿತ್ಯನಿರಂಜನಗೆ
ಶರಣರ ಮುಖಶಿರ ಶಿವ ಸರ್ವಧಾರಿಗೆ
ಹರಿಗಮನೆಯರಾರತಿ ಎತ್ತಿ ||೪||

ರತಿಯತಿಗಳ ಸೊಗ ಯತಿರನ್ನಗೆ
ಯತಿ ತತಿ ಚಿಂತಾಮಣಿಗೆ
ರತಿಸುರಗಮರಸಾರಂಗ ಸಮರಾಜ ||೫||

ಆಲಿ ತಂತಿಯಲಾರತಿ ಎತ್ತಿ
ಗುರುವಿಗೆ ಗುರುರಾಯಗೆ ಗುರುತೇಜಗೆ
ಸರ್ವಾಂಗ ಗುಣಗಂಭೀರಗೆ ಶರಣಮುಖ ಶಿರಸರ್ವತಾರಿಗೆ
ಹರಿಗಮನೆಯರಾರತಿ ಎತ್ತಿರೆ ||೬||

ಖಟ್ವಾಂಗಿಗೆ ಕಾಲಾಂತವಿಪರಿಗೆ ಕಕಲಾತಗೆ ಕರುಣಿತಗೆ
ಶ್ರೇಷ್ಠಗೆ ಗುರುಬಸವ ಪ್ರಾಣೇಶಗೆ
ಪಟ್ಟದೊಡೆಯ ಮೊಗ್ಗೆ ಅಲ್ಲಯ್ಯಗೆ ||೭||*

---

* ಈ ಹಾಡು ಅಶುದ್ಧವಾಗಿದೆ. ಅರ್ಥ ಅಸ್ಪಷ್ಟ (ಸಂ)

## ಪ್ರಾರ್ಥನೆ-ಸ್ತುತಿ-ನೀತಿಬೋಧಾ ರೂಪದ ಸ್ವರವಚನಗಳು

೧

ರಾಗ: ಶಾಮಕಲ್ಯಾಣ, ಆದಿತಾಳ

ಪಾಲಿಸು ಪ್ರಭುವೆ, ಕೃಪಾಳಿಯೆ ಮುದದಿ ಪಾಲಿಸು ಪ್ರಭುವೆ
ನೀಲಕಂಧರ, ಕ್ಷಿತಿಪಾಲ, ಮಾಮ್ ಇಷ್ಟ ಅಲ್ಲಮ ||ಪಲ್ಲ||

ಪತ್ರಗಮನ ನೇತ್ರ, ಪತ್ರಸನ್ನುತಿಪಾತ್ರ
ಪತ್ರವೈರಿಯ ಪತ್ರ ಮಿತ್ರಾಗ್ನಿನೇತ್ರ ||೧||

ಪತ್ರಭವನಾ ಶಿರಾಪಾತ್ರ, ಭವಲಾತಲಾ
ವಿತ್ರ, ಭವಾಂಬೋಧಿ ಭೈತ್ರ ನಿರಂಜನ ||೨||

ಪತ್ರವೈರಿಯ ಶತ್ರು ಸ್ತೋತ್ರ ಪ್ರಿಯನೆ ಶತ-
ಪತ್ರ ವಂದಿತ ಕರಪತ್ರ ಗುರುಚರಲಿಂಗ ||೩||

೨

ರಾಗ: ಸಾವೇರಿ, ಆದಿತಾಳ

ಚಂದ್ರಶೇಖರ ಕೃಪಾಸಿಂಧು ಪಾತುಮಾಂ
ನಂದನಿವಾಸ ಮುಕುಂದಾರ್ಚಿತ ಪ್ರಭು
ಸ್ಕಂದಜನಕ ಸುರವೃಂದ ವಂದಿತನೆ ||ಪಲ್ಲ||

ಅಂಬುಜೋದ್ಭವ ಶಿರಕರ, ಅಂಬುಜಾಕ್ಷಾರ್ಚಿತ ಚರಣ
ಅಂಬುಜಾಪ್ತಾಣುಗಧ್ವಂಶಿ ಅಂಬುಧಿಧರ ಸುಖದಾಯಕ

ಅಂಬಕತ್ರಯ ಜಗದಾಂಬಿಕೆಪತಿ ಭವ
ಶಂಬರಾರಿ ಹರ ಅಂಬರಕೇಶ ||೧||

ಮಂದರಚಾಪ ಭಾನು ಚಂದ್ರಾಗ್ನಿಲೋಚನತ್ರಯ
ದಿಂದ ಲೀಕ್ಷಿಸಲು ತ್ರಿಪುರ ಬೆಂದು ಹೋಯಿತಭವಜ
ಲಂಧರ ಕರಿದನುಜೇಂದ್ರರ ಹತಿಸಿದ
ಸಿಂಧುಜ ಶರಹರ ಮಂದರನಿಲಯಾ ||೨||

ಹರಿನೇತ್ರ ಹರಿಸಖ ಉಮಾವರ ಶಂಭೋ ಸುಖದಾಯಕಾ ಶಂ
ಕರಾಭಯಕರನೆ ದಿನಕರಕೋಟಿತೇಜ
ವರ ಇಷ್ಟಾರ್ಥವ ತ್ವರಿತದಿ ಕರುಣಿಸು
ಪರಮ ಪರಂಜ್ಯೋತಿ ಗುರುಚರಲಿಂಗ ||೩||

೩

ರಾಗ: ಭೂಪಾಳಿ, ಆದಿತಾಳ

ಏಳು ಶ್ರೀ ಗೌರೀರಮಣ, ಏಳೆರಡು ಲೋಕ ಗಣಗಂಧರ್ವನುತಿ ಸಾಂಬ
ಕೇಳು ಮಮಜನಕ ಪ್ರಭು ಭಾಳಾಕ್ಷ ಬೆಳಗಾಯಿತು ||ಪಲ್ಲ||

ಪಂಚವಿಂಶತಿ ತತ್ವಾತೀತ ನಿರ್ಗುಣಲೀಲ
ಪಂಚವಿಂಶತಿ ನಟನ ಪಂಚತಾರಕದರ್ಥ
ಪಂಚಮುಖ ದಶಪಂಚನೇತ್ರ ದ್ವಿಪಂಚಕರ
ವಾಂಚೆಸಿಧಿಪಕ್ಕಂಚೆ(?)ಅನ್ನಪೂರ್ಣೆಯ ಹರಣ ||೧||

ದಾಕ್ಷಾಯಣಿ ಎಂಬ ನಾಮವನುಳಿದು ಹೈಮವ
ತ್ಯಾಕ್ಷಣದೊಳೆನಿತುಗ್ರ ತಪವೆಸಗಲೊಲಿದು ಪ್ರ
ತ್ಯಕ್ಷ ಗಿರಿಜಾ ಕಲ್ಯಾಣವಾಗಿ ಪೂಮಳೆಗರಿಸಿ
ದಕ್ಷತ್ರಯ ಭಕ್ತಿಪ್ರಿಯ ಮೋಕ್ಷ ಪ್ರದಾಯಕ ||೨||

ಕರಣೇಂದ್ರಿಯ ೧[ದತಿಸೈನ್ಯದ]೧ ಮದವ ಪರಿಹರಿಸಿ ಅಖಿಳ
ಚರಕೆ ಇಷ್ಟಾರ್ಥಂಗಳಿತ್ತು ಮಹತ್ವಮಂ
ಮೆರೆದ ಗಂಗಾದೇವಿ ನೀಲಲೋಚನೆ ವೃಷಭ ಪ್ರಮ
ಥರು ಪಾಡುವರರಿದು ನಾ ಕರೆ ಬಂದೆ ಹರನೇ ||೩||

---

೧-೧ ಹತಿ ಸೆಂನ್ಯ(ಮೂ)

ಚೋಳ ನಂಬಿಯು ಮಾಳದೇವಿ ಚೋಳದೇವಿ
ಗೇಳು ದಿನ ಕನಕವೃಷ್ಟಿಯ ಕರೆದು ರಕ್ಷಿಸಿದ
ವ್ಯಾಳಕಂಕಣನ ಪ್ರಮಥಾಳಿ ನುತಿ ಭೂಪಾಳಿ
ಕೇಳಿಸುವರಾದರಾಮೃತ ಗಾನಧ್ವನಿ ಗೇಳಿ ||೪||

ಕನಕಗರ್ಭಂ ಶೌರಿಗಿನಿತು ಅಡಿಮುಡಿ ತೋರ
ದನ ಘನುರಿಲಿಂಗ ವಾಙ್ಮನಾತೀತ ಪರಶಿವನೆ
ಚಿನುಮಯಾನಂದ ಸುಷುಪ್ತಿ ಗುರುಚರಲಿಂಗ
ವನಜರಳೆ ನಾರದಮುನಿ ಗಾನಸ್ತುತಿ ಕೇಳಿ ||೫||

೪

ರಾಗ: ಭೂಪಾಳಿ, ಆದಿತಾಳ

ಏಳುತಲಿ ಪಾಡು ಶಿವನ
ಏಳುತಲಿ ಪಾಡೊ ಶಿವನ
ಏಳುಕಾಲ ತಿಳಿದು
ಭಾಳಾಕ್ಷ ಪ್ರಭುವಿನ ಉದಯವೇಳೆಯೊಳು ಮನವೆ ||ಪಲ್ಲ||

ಫಲಪದಂಗಳು, ಅಷ್ಟ[೧][ಮದದಿ][೧]ವಿಸ್ಮೃತಿಗೊಳ್ಳದೆ
ಹೃದಯದೊಳಗಿರುತಿರ್ಪ ಜ್ಞಾನಾಗ್ನಿ ಪುಟಮಾಡಿ
ಮುದದಿ ಜ್ಯೋತಿಯ ಮುಟ್ಟಿಸಿ ಅದರ ಬೆಳಗಿನೊಳು ಪ್ರಭು
ಪದಕಮಲ ಧ್ಯಾನಿಸುತೆಲೆಮನವೆ ||೧||

ಅರಿ ವಿಷಯವೆಂಬಖಿಳದುರುಳರಿಗೆ ಮರುಳ ನೀ
ಅರಿಯಾಗದಿರಲು ನಿನ್ನಯ ಜ್ಞಾನರತ್ನವನೆ
ಹರಣ ಮಾಳ್ಪರು ಜಾಗರಿರಲಿ ದೇವಜ್ಞಾನಶಸ್ತ್ರಾ
ಸ್ತ್ರದಲ್ಲಿ ಸಂಹರಿಸು ಬೇಗ ಮನವೆ ||೨||

ಏಳು ತಾಮ್ರಚೂಡಗಳು ಏಳದಮುನ್ನ
ಏಳು ಭವಮೃತ್ಯಕೋಲಾಹಳ ಪ್ರಭುವಿಗೆ
ಕೇಳಿಸು ಉದಯ ರಾಗಗಳ, ಗುರುಚರಲಿಂಗ
ನೊಳು ಸುಖಿಸಿ ಬಾಳು, ಕೇಳು ಮನವೆ ||೩||

೨-೨ ವಿಧದಿ (ಮೂ)

೫೯

ರಾಗ: ಧನಾಶ್ರೀ, ಆದಿತಾಳ

ಆಶೆಯ ನೀಗೋ ಮನವೆ ಬೇಕೆಂದು ಬೇಡುವ
ಆಶೆಯ ಭವಚೌರ್‍ಯಾಂಶಿ ಫೇರಿಯೊಳು
ಗಾಸಿ ಮಾಡುವ ಹೇಸಿ ತೊತ್ತಿವಳ ||ಪಲ್ಲ||

ಕಾಸು ಪಾಕಿ ತನಗಿಲ್ಲದಿರಲೊಂದು
ಸಾಸಿರ ಹೊನ್ನುಸಾಕೆಂಬರು
ಸಾಸಿರಕೊಟ್ಟರೆ ಸಾಲದೆ ಹೊನ್ನಿನ
ರಾಶಿ ಮೇಲೆ ದಿಗ್ಭೇಶವ ಬೇಡುವರು ||೧||

ನೂಲ ಎಳೆ ಒಂದಿಲ್ಲದಿರಲು ಹಳೆ
ಶಾಲು ರಗಟೆ ಕೊಟ್ಟರೆ ಸಾಕೆಂಬರು
ಶಾಲು ಸುತ್ತಿ ಸಕಲಾತಿ ಕೊಡಲಿಕ್ಕೆ
ಮೇಲೆ ಭರ್ಜರಿ ಶಾಲು ಬೇಡುವರು ||೨||

ಹೊನ್ನಿನಾಶೆಯಲಿ ನಾಗಾರ್ಜುನ ಹತ
ಹೆಣ್ಣಿನಾಶೆಯಲಿ ದಶಕಂಠ ಮೃತ
ಮಣ್ಣಬಯಸಿ ಪಾಂಡವರಳಿದರು ತಿಳಿ
ಎನ್ನ ಪ್ರಭು ಚರಲಿಂಗನ ಭಜಿಸು ನೀ ||೩||

೬೦

ರಾಗ: ಕಾಫಿ ಜಂಗಲಾ

ಭಜೋರೇ ತುಮ್ ಪ್ರಭುರಾಜ ಕೊ ಭಜೋರೇ ತುಮ್
ಗಜಮುಖಪಿತ ಪ್ರಭು ನಿಜ ಗುರುಚರಣಂ ||ಪಲ್ಲ||

ದಾರುವನಾಮುನಿ ಕ್ರೂನ(ರ?) ಮದಾ ತೊಂ (ತುಂ?)
ಗಾರ ಕರೆ ಶಂಕರ ಪ್ರಭು ಕೊ ||೧||

ನಾರದಾರ್ಚಿತಂ ಮಾರಮರ್ದಕೊ
ವಾರಿಜಾಕ್ಷನತಂ ಅಪಾರ ಮಹಿಮಕೊ ||೨||

ಕಾಲ ಕಾಲ ಕಪಾಲವಾಲಕೊ
ಶೂಲಿ ಗುರುಚರಲಿಂಗನೇತ್ರ ಕೊ ||೩||

# ಆರತಿ ಮತ್ತು ಬೆಡಗಿನ ಸ್ವರವಚನಗಳು

೧

ರಾಗ: ಜಂಗಲಾ, ಆದಿತಾಳ

ಎತ್ತಿರಾರತಿ ಕರ್ಪೂರ ಗೌರಾ
ಎತ್ತಿರಾರತಿ ಮುಕ್ತಿದಾಯಕ ಮಮಕರ್ತೃ ಪ್ರಭುವಿಗೆ ||ಪಲ್ಲ||

ಗೋಕರ್ಣಕರ್ಣ ತರಣಿಕೋಟಿ ಕಿರಣ
ಗೋಕರ್ಣಕರಕಂಠಾಭರಣ ಪ್ರಭುವಿಗೆ ||೧||

ಗೋಕರ್ಣಗಾನ ಸಂಪ್ರೀತ ಮನ್ನಾಥ
ಗೋಕರ್ಣರಾಜಯಜ್ಞೋಪವೀತ ಪ್ರಭುವಿಗೆ ||೨||

ಗೋಕರ್ಣಶಯನ ಆತ್ಮಭವ ಮದಭಂಗ
ಗೋಕೇಶ ಗುರು ಚರಲಿಂಗ ಪ್ರಭುವಿಗೆ ||೩||

೨

ರಾಗ: ಅಸಾವರಿ, ಏಕತಾಳ

ಎತ್ತಿರಾರತಿ ಮುದದಿ ಪ್ರಭು ನಿತ್ಯನಿರಂಜನ ರತ್ನಕಿರೀಟಗೆ ||ಪಲ್ಲ||

ಅಂಗಜಾಂತಕ ಕ್ರತುದರ್ಪಭಂಗ
ತುಂಗಗಂಗೋತ್ತಮಾಂಗಗೆ ||೧||

ಸೋಮ ಸೂರ್ಯಾಗ್ನಿಲೋಚನ।
ವ್ಯೋಮಕೇಶ ಪ್ರಭುಸ್ವಾಮಿ ನಿರಂಜನಗೆ ||೨||

ಇಂದ್ರಾದ್ಯರ್ಚಿತ ಗುರುಚರಲಿಂಗೇಂದ್ರ
ಚಂದ್ರಧರ ಸಾಂದ್ರ ಗಣೇಂದ್ರಗೆ ||೩||

೩

ರಾಗ: ಭೈರವಿ, ಆದಿತಾಳ

ಬೆಳಗಿರಾರತಿ ಮುದದಿ ಅಷ್ಟದಳ ಮಂಟಪದೊಳು
ಹೊಳೆವ ಪ್ರಭುವಿಗೆ ||ಪಲ್ಲ||

ಉತ್ತರದ ತಾರಕ ಚಂದ್ರಾದಿತ್ಯ ಮಂಡಲದ
ನಿತ್ಯತೃಪ್ತಗೆ ||೧||

ಶತಪತ್ರ ಮಧ್ಯದೊಳು ಪ್ರತಿರಹಿತ
ಭವ್ಯಾಕೃತಿಯ ನೀಕ್ಷಿಸಿ ||೨||

ಕರಕಂಜ ಪುರವಾಸ ಮದ್ಗುರು
ಚರಲಿಂಗನ ಬೆರೆವ ವಿಬುಧರು ||೩||

೪

ರಾಗ: ಸಾರಂಗ, ಆದಿತಾಳ

ಅಕ್ಕಾ ಈ ಶ್ಲೋಕದರ್ಥಹ್ಯಾಂಗ। ತಿಳಿಯೆ ಪೇಳೆನಗಕ್ಕಾ
ಮಕ್ಕಳಾಟಿಕೆಯಲ್ಲ ಮುಕ್ಕಣ್ಣ ಪ್ರಭು ತಾ ಬಲ್ಲ ||ಪಲ್ಲ||

ಬೆಕ್ಕು ಪಾಕಂಗೈಯುತ್ತಿರಲಿಕ್ಕೆ ಇಲಿಯು ಉರಿಹಚ್ಚಲಾಗಿ
ಎಕ್ಕಲ ವ್ಯಾಘ್ರ ದಿಕ್ಕುಗೆಡಲು।
ಪಕ್ಕಾ ತೆಗೆದು ನವಿಲು ಕುಣಿಯಿತಕ್ಕಾ ||೧||

ಕೋಣ ಗಜವನುಂಗಲದರ
ಗೋಣ ಮುರಿದು ಗಿಳಿ ನುಂಗಿತು

ಜಾಣನಾತ್ಮಪಂಜರದೊಳು
ಮಾಣದೆ ಗಿಳಿ ಶಿವನಾಮವನೋದಿತಕ್ಕ ||೨||

ಮೂರುವಳಿದುಳಿದರೆ ಭಕ್ತ
ಆರುಜ್ಞಾನವರಿಯೆ ವಿರಕ್ತ
ಮಾರಾರಿ ಗುರುಚರಲಿಂಗೇಂದ್ರನ
ಕಾರುಣ್ಯದಿಂದಿರುವನಕ್ಕಾ ||೩||

## ಪ್ರಾರ್ಥನಾ ರೂಪದ ಸ್ವರವಚನಗಳು

೧

ರಾಗ: ಭೈರವಿ, ತ್ರಿತಾಳ

ಪಾಲಿಸೆನ್ನ ಪ್ರಭು ಅಲ್ಲಯ್ಯ
ಬಾಲಗೆ ದಯ ಮಾಡಲೊಲ್ಲಯ್ಯ ||ಪಲ್ಲ||

ಘೋರಭವಾರ್ಣದಿ ಸೇರಿ ನಾ ಶ್ರಮಿಸಿದೆ
ತಾರಿಸುವರ್‍ಯಾರಿಲ್ಲವಯ್ಯ ||೧||

ಮನುಜಜನ್ಮದಲಿ ನಾನು ಬಂದೆನಲ್ಲ
ಜ್ಞಾನದೊಂದು ಅರಿಯೆ ಸೊಲ್ಲಯ್ಯ ||೨||

ಮುಪ್ಪಿನಮುನಿಯೆಂದು ಒಪ್ಪುವ ಹೃದಯದಿ
ಗೌಪ್ಯದಿ ಬಂದು ನೀ ನಿಲ್ಲಯ್ಯ ||೩||

೨

ರಾಗ: ಸಾರಂಗ, ತಾಳ: ದಾದರಾ

ಪಾಲಿಸಯ್ಯ ಪ್ರಭುವೆ, ರಕ್ಷಿಸಯ್ಯನೆ ||ಪಲ್ಲ||

ಕರುಣಿಸಯ್ಯ ಪ್ರಭುವೆ ನೀನು
ಮರೆದು ನಿನ್ನಧರೆಗೆ ಬಂದೆ ಸಂ
ಸಾರವೆಂಬ ಉರಿವ ಕಿಚ್ಚಿನೊಳಗೆ ಬೆಂದೆ
ಯಾರು ಇಲ್ಲೊ ಹಿಂದು ಮುಂದೆ
ಕಂದುಗೊರಳನೆ ಇದು ಚಂದವಲ್ಲವೊ ||೧||

ಕಂದುಗೊರಳ ನಿನ್ನಕೃಪಾಸಮುದ್ರವೆಲ್ಲ ತೀರಿದಂತೆ
ಮನ್ನಿಸುವುದು ವ್ಯರ್ಥ ಮಹಾ ಅನಂತಕೋಟಿ
ಬ್ರಹ್ಮಾಂಡನಾಥ ||೨||

ಕರುಣವಿಲ್ಲವೋ ನಾನು ಪಾಪಿಯಲ್ಲವೆ ಕರುಣವಿಲ್ಲವೇನು ನಿನಗೆ
ಸುರಭಿ ಕೋಪಿಷ್ಠವಾದರೆನಗೆ
ಕ್ಷೀರ ಕರೆಯುವುದು ಮತ್ತೆ ಧೀರಶರಣರ ಮನೆಯ ದಾಸ ||೩||

ಎಷ್ಟುಪೇಳಲಿ ನಿನ್ನ ನಿಷ್ಠೆ ಗುಣವನು ಶ್ರೇಷ್ಠ ವಸುಧಿ ತ್ರಿದಳವಾಸ
ಇಷ್ಟಭಜಕರಿಗೆ ಕರುಣದಿಂದ ಇಚ್ಛಿತಾರ್ಥಗಳನು ಕೊಟ್ಟು
ತುಷ್ಟಿ ಮಾಡಿ ಬಿಡೋ ದೇವ ||೪||

ಎಂತು ಪೇಳಲಿ ನಾನೆಂತು ಹೇಳಲಿ ಶಾಂತತ್ರಿದಳಗಿರಿಯ ದೊರೆಯ
ಕಾಂತನೆಂದು ನಂಬಿದವರ ಚಿಂತಿತಾರ್ಥ ಕೊಡುವುದಲ್ಲದೆ
ಪಂಥ ಮಾಡುವರೇನು ದೇವ ||೫||

ಆಸೆ ತೀರಿತು ಜೀವ ಮೋಸವಾಯಿತು ಏಸು ಜನ್ಮದಿರವು ಸಹ
ವಾಸ ಒಂದು ನಿಮಿಷದೊಳಗೆ ನಾಶವಾಗಿ ತ್ರಿದಳ
ವಾಸಗೆ ನಾ ಬೇಸರಾದೆ ||೬||

ಕಾಡಬೇಡವೊ ಎನ್ನ ಕರುಣಸಾಗರನೆ ಕಾಡಬೇಡ ಕರುಣಸಾಗರ
ಬೇಡಿಕೊಂಬೆ.ನಿನಗೆ ದಯಮಾಡು ಮತಿಯನ್ನು ಎನ್ನ ಮೇಲೆ
ನೀಡು ತಡವ ಮಾಡಬೇಡ ||೭||

ಬೇಡಿಕೊಂಬೆ ದಯಮಾಡೊ ಅಲ್ಲಮಾ ಬೇಡಿಕೊಂಬೆ ನಿನ್ನ ದಯ
ಮಾಡೊ ಎನ್ನ, ನೀಡೊ ವರವ ನೀಡೊ ಎನಗೆ ತ್ವರಿತದಿ
ಪಾಡುವೆನು ಕೊಂಡಾಡಿ ಸತತ ||೮||

ಕಾಯಕಷ್ಟದಿ ಬಹುಘಾಯಗೊಂಡೆನು
ನೋಯದಂತೆ ಮಗಿಯ ಸುತನ ಕಾಯೊ ಕರುಣದಿಂದ ನೀನು
ಮಾಯಾರಹಿತಸ್ಥಲಕೆ ನೀನು ಒಯ್ಯೊ ದೇವ ಆಯತಾಕ್ಷ ||೯||

೩

ರಾಗ: ತೆಲಗಕಾಂಬೋದಿ

ಶರಣು ಶರಣು ಲಿಂಗವೇ ನಮೋ ನಮೋ
ಮರಣರಹಿತ ಪಾಹಿ ಮಾಂ ||ಪಲ್ಲ||

ಕದ್ರುವಿಸುತಧರೆಗೆ ನಾ ಚಿದ್ರೂಪ ಚಿನ್ಮಯಗೆ, ನಾ
ರುದ್ರಾವತಾರನು ವೇತ್ರವಂದಿತಗೆ
ಕ್ಷುದ್ರ ದಕ್ಷನ ಶಿರವ ಹರಿದವಗೆ ||೧||

ಕಾಮಕೋಲಾಹಲಗೆ ನಾ ಕಾಮರಹಿತದೇವಗೆ ನಾ
ಕಾಮ ರಹಿತ ಕಾಲಹರಗೆ, ಕಪರ್ದಿಗೆ
ಕಾಮಿತಫಲವೀವ ಕರುಣಿ ಜಂಗಮಗೆ ||೨||

ನಿರ್ಮಳ ಗಣನಾಥಗೆ ನಾ ಕರ್ಮರಹಿತ ದೇವಗೆ ನಾ
ಕರ್ಮರಹಿತ ಕಾಲಹರಗೆ ಕಪರ್ದಿಗೆ
ನಿರ್ಮಳಾಂಗ ನಿಜಲಿಂಗ ಜಂಗಮಗೆ ||೩||

ಮಂದಾಕಿನೀಧರಗೆ ಇಂದು ಜಟಾಶಿವಗೆ ನಾ
ಸಿಂಧುಚರ್ಮವ ಪೊದ್ದ ಶಿತಿಕಂಠ ದೇವರಿಗೆ
ನಿಂದಕರದೆಯಲ್ಲಿ ಶೂಲ ಜಂಗಮಂಗೆ ||೪||

ಮುನ್ನ ಮಾಡಿದ ಕರ್ಮವನು ನಾ
ಚೆನ್ನಾಗಿ ಪರಿಹರಿಸೊ ಚನ್ನಬಸವನಾಥಾ ಹೊಳೆಯ ಹುಚ್ಚೇಶ್ವರ
ನಿಮ್ಮ ಭಜಿಸಿದೆನೊ ಹೃದಯನಿವಾಸ ||೫||

೪

ಶ್ರೀರಂಜಿತ ಸುಖಸಾರ
ಪರಾತ್ಪರಧೀರ ಶೃತಜನವರದಾ
ತೇರದಾಳ ಪುರಾಗಾರ ದ
ಯಾರಸಪೂರ ಪ್ರಭುವರ ಸಲಹು ||೧||

ಶೃತಜನೇಷ್ಟವ ಸುರ
ಕ್ಷಿತಿ ಜಯವೇ ತತಿವಾರ್ಯ

ಶಿತಿಕಂಠರೂಪ ಶ್ರೀಕರ ಶಂಕರ
ಶೃತಿತತಿಸ್ತುತ ಸದಾ
ನತ ವರದ ವೈರಾಗ್ಯ
ಪತಿ ಪರಾನಂದ ಪ್ರಭುರಾಯ ಸಲಹು ||೨||

ಆದಿಗಾದಿಯಾದ ದಿವ್ಯ
ನಾದ ಮೋದ ಬೋಧ ಶ್ರೀ
ಪಾದಭಜಕ ಶುಭದ ಚಿದ್ವಿನೋದ ವಿಗ್ರಹ
ಮೇದಿನಿಯೊಳು ಸುಗುಣಮೂರ್ತಿ
ಯಾದ ವೇದವರಿಯದ ಭವ
ಕಾದಿ ವಂದ್ಯ ಪ್ರಭುವರೇಣ್ಯ ಪಾಲಿಸೆನ್ನನು ||೩||

ನಿರಘ ನಿಷ್ಕಲ ನಿಖಿಲ ಮಾಯಾ
ವರಣಮೇಘೋದ್ರೇಕ ಮಾರುತ
ಶರಣ ಚೇತಃ ಸರಸಿಜಾರುಣಕಿರಣ ನಿರ್ಮಲನೆ
ತರುಣಭಾಸ್ಕರಕೋಟಿ ಕಿರಣ
ಸ್ಫುರಣ ಪಾದಸ್ಮರಣ ಕಲ್ಮಿಷ
ಹರಣಗೈವ ವಿರಕ್ತರಾಜ ಪ್ರಭುವೆ ಪಾಲಿಪುದು ||೪||

ನಡೆವೆಡೆಯೊಳ್ ಪೊಡವಿ ಪಾವನ ಸಂ
ಗಡ ನುಡಿಯಲ್ ಮಂತ್ರವ್ರಜಹೋತವು
ಬಿಡದೆ ನೋಡಲಾಕಾಶ ಪವಿತ್ರತೆಯಾಗುವ ತೆರನರಿದು
ದೃಢಧಿ ಪಾಡಲಾಸಮವು ಪಾವನ
ವಡೆವುದು ಬ್ರಹ್ಮಾನಂದದ ಚಂದದ
ಒಡೆಯನೆ ಭವಜಡಧಿಯೊಳೆನ್ನನು ಕಡೆಹಾಯಿಸು ಪ್ರಭುವೆ ||೫||

ಬಿರಿದಿನಾ ಮಾಯಿಯ ಮುರಿದ ದೇವೇಶನು
ಗಿರಿಜೆಯೊಳ್ ಸೆಣಸಿ, ಗೀರ್ವಾಣ
ವಂದಿತ ಮಹೇಶ್ವರ ಚಿತ್ಕ
ಲಾರೂ ಪವನಿಯೊಳು ಸುಜ್ಞಾನಿ ನಿರಹಂಕೃತಿಯೊಳವತರಿಸಿ
ಧರಣೆಯೊಳ್ ಭಕ್ತ ಮಾಹೇಶ್ವರರ ಮಂಡಳಿಯೊ
ಳಿರನು ತೇರದಾಳದ ಜಗದ್ವಿಖ್ಯಾತದಿ

ಮೆರೆವ ದೊರೆ ಅಲ್ಲೇಂದ್ರ ಸಂತತಿಯ
ಪೊರೆವ ಸುಂದರ ಮೊಗೆಯ ಪ್ರಭು ಸಲಹು ||೬||

ಶರಕುಸುಮಾದಿಗಳೆಂಬರು
ದೆರದಾ ಷಟ್ಪದಿಗಳೆಂಬಿವು ಕುವಲಯದಿ
ಗುರುವರ ಶ್ರೀ ಕರಪದಸರ
ಸಿಜಗಳಿಗೆರಗಿ ಆನಂದಿಸುವವು ನಿರುತಂ ||೭||

ಸಿದ್ಧೇಶಾನಾಗ್ರಹದಿಂ
ತದ್ದೇಶದೊಳೆಸೆವ ದೇವಾರಾಧ್ಯನ ನೋಡಲ್
ಹೃದ್ದೇಶದಿ ಬೆರದ ಪದ್ಯಗಳಿವು
ಹೃದ್ಯಮೆನಿಸಿ ಧರಣಿಯೊಳು ||೮||

೫೫

ರಾಗ: ಕನಕಾಂಬೋದಿ,

ಎಂದಯ್ಯ ಭ್ರೂಮಧ್ಯದಲ್ಲಿ ಉನ್ನತ ಗಿರಿಯ ಮೇಲೆ
ಚಿನ್ಮಯ ಚಿದ್ರೂಪ ತಾನಿರ್ದು ಸಿದ್ಧಪ್ರಭುವೆ
ಬಂದು ನೀ ಎನ್ನ ಸಲಹೋ ||೧||

ಹರ, ನಿಮ್ಮ ಲೀಲೆಯಿಂದ ಮರೆದು ಮಾನವನಾಗಿ
ಪರಿಭವದೊಳು ಬಂದೆನೊ ಏ ಸಿದ್ಧಪ್ರಭುವೆ
ವರ ಸುಜ್ಞಾನವ ಪಾಲಿಸೊ ||೨||

ಸ್ವಾನುಭಾವದುದಯದಿಂದ ಜ್ಞಾನಲಿಂಗವನೆ ಕಂಡು
ಧ್ಯಾನಿಸುತಿರಲು ನಾ ಮುನ್ನ ಏ ಸಿದ್ಧಪ್ರಭುವೆ
ಹೀನ ಸಂಸ್ಕೃತಿಯ ಕಂಡೆನೊ ||೩||

ಮಲತ್ರಯದಿಂದ ಮಾಯೆಯ ಬಲೆಯ ಪಾಶದೊಳಿರ್ದು
ನೆಲೆಯ ಕಾಣೆನು ನಾ ಮುನ್ನ ಏ ಸಿದ್ಧಪ್ರಭುವೆ
ಒಲಿದು ಸಲಹು ಗುರುವೆ ||೪||

೬

ಬಗೆಬಗೆಯಿಂದಲಿ ಝುಗಝುಗಿಸುವ
ತೇರದಾಳದ ಮಗಿ ಪ್ರಭುಸ್ವಾಮಿ ||ಪಲ್ಲ||

ಆಶೆ ಮೋಹವಿಡಿದು ಕ್ಲೇಶಬಟ್ಟೆನು ಬಹಳ
ದೋಷ ಪರಿಹರಿಸೊ ನಿಷ್ಕಾಮಿ ||೧||

ನಾನು ನನ್ನದು ಎಂಬ ಮಿಥ್ಯಾ ಕಲ್ಪನೆಯಳಿದು
ಧ್ಯಾನ ಕೊಡೋ ಭಕ್ತರಪ್ರೇಮಿ ||೨||

ನರಸಿಂಹನಾಥ ವಂದಿಸುವೆ ನಿರಂತರ
ಗುರುವಿಶ್ವಂಬರ ಸುಜ್ಞಾನಿ ||೩||

೭

ಅಲ್ಲಮಪ್ರಭುಕಾಸೋಹಿಲಾಗವೊ
ಏಕದಿಲ್ ಸುಸಿರಾ ಭುಲಾಗವೊ ||ಪಲ್ಲ||

ಮಗಿಯ ಹೈ ನಾಮತುಮಾರಾ
ಕಾಲಕಿ ಮತ್ ಕರೋ ಸಾದಾರಾ
ತಕ್ಕಜಡಿತ ಪಾಂಚಹಾರ ಹೀರಾ
ದೀನ ದುನಿಯಕು ತುಂ ಏಕಪೀರಾ ||೧||

ಚರೊ ಕಂಡದೇಕೆ ಪೀರಕಾರಾ
ಹಜಬರೆಕವಿ ಸಜಮೀನ ಪೀರಾ
ದಿವ್ಯಾ ಭರ್ಗೋ ಹೈತೊ ಸಾರಾ
ಪಂಚೇಂದ್ರಿಯ ಅಂಬಾರಾ
ನಾಕು ಸೋತು ಹೈ ತೊಸಾದಾರಾ ||೨||

ತಿವಾಸ ಜಡಿತೊ ಹೈ ಕೆರ್ಮಮಿ ಪುರ್ವಾಯವೊ ಕಿಂಕರಸಾನಿ
ಜೀನಿದೂರಾ ಸುನ್ಯಾ ಕಿಲ್ಯಾಣು
ಕ್ಯಾ ಖೂಬ ಬಹು ಸಹಾರಾ ಕಿಸಾನಿ ||೩||

ನಿಃ ಪ್ರಪಂಚಹೈ ತೂ ಸಾರಾ
ಪಂಚೇಂದ್ರಿಯ ಕು ತುಮಾರಾ

ಐಸಿ ನಿರ್ಗುಣ ನಿರಹಂಕಾರಾ
ರೂಪು ಲಾವಣ್ಯತೆ ಅಗೋಚರಾ ||೪||

ಭಸ್ಮ ಧೂಳಕಿ ತಕಾಸ ನಯನೆ ಅಗ್ನಿ ಜಲಮಹಿತ ಲಗ್ನ ದಿಗಂಬರೊ
ದಾರ್ವ ಶೇಕ ಭುಲ ಸೂರತದೇಖೆ ಅಲ್ಲಮೇಶ ||೫||

ಜಲತೆದು ಊದಕಾಡಿಯಾ ಪುಷ್ಪನ್ನೆದಿವಾನ್ನೆ
ಸಂಗತ ಮಾರ್ಗತಿಗತ ಘನಕಾ ಚಿತ್ತಶುದ್ಧಗ
ಕರಸನಾಪ ದಂಡ ಮಿನವಿಕಿತ ಅಪರೂಪಾ ||೬||

ಪಾಲಕಿ ದಿಖತಿ ಹೈ ಬಹುತ ಖೂಬ, ಮೇಲೆ ಬಾತಿಸ್ತಮೆ ಶಂಬಾ
ಪಡವಿಲ ಕರಸ್ತ ಅಂಬಾರಾ ನಾಕು ಸೋತ ಹೈತೋಸಾದಾರಾ ||೭||

ಹುಡುಕರಾಬ ಭತಿತೆ ಮಾಂದಾಲ ಬಾಜ ಉಪಂಗ
ಚಾರ ಮಾಂಡಾಲ ಪಾತ್ರನಾಚತಕೂ ಬಹುತ ಸೂಲಿ
ಅಂಗೆ ಚಲತೆ ಹೈ ದಿವಟ ಹಿಲಾಲಾ ||೮||

ಭಾಟಪಡತೆ ತೇರಾ ಪವಾಡಾ ರಸ್ತಂ ಚಂಪ ಹೈ
ಮಾಲದಾರ್, ಕಡ್ಯಮಾಯಾ ಮತರ್ೂಪ ಸೂರಿ ಪಾನಾ
ನ್ಯೇಡ ದೋನೋಬಾಜ ಚೇರೆ ರುಮಾಲ ಉಡ ||೯||

ಬಾಜಡಮೆ ಮೈಘರ ಜಲಾಂಬರಾ ಕಾಕೀಯಕರತನ
ಪೇರೆ ಮಾಲದಾರಾ ಬಾಜ ಸೋನಾರಯಿ ವಾಡಭಜತ್ತಾರಾ
ಪ್ರಭುಲಿಂಗ ದೇಖತೇ ನಜರಾ ||೧೦||

ಎರಸೊ ದಿಸ್ತಿ ಬಾಹು ತುಮಾರಾ ದೇಶತೇರದಾಳ
ಮೊಮೊ ಮೊಕಾಶ ವ್ಹಾಜಯದಿ ಕರೆ
ಅಲ್ಲಮೇಶ ಬ್ಯಾ ದಿಸ್ತಾರಾ ಕಾಗಪಾಶಾ ||೧೧||*

೮

ರಾಗ: ವರಾಳಿ

ರಕ್ಷಿಸೆನ್ನನು ರಜತಾದ್ರಿವಾಸ, ಮನ್ಮಥವಿನಾಶ
ಕನ್ನೆ ಪ್ರಾಯದೊಳು ನಿನ್ನನು ನಂಬಿದೆ
ಚನ್ನಾಗಿ ಮನ್ನಿಸಿ ಕಾಯೊ ಶ್ರೀ ಗುರುವೆ ||ಪಲ್ಲ||

* ಹಾಡಿನ ಭಾಷೆ ತಿಳಿಯದು. ಅರ್ಥವೂ ಅಸ್ಪಷ್ಟ (ಸಂ)

ಭವಭವದಲ್ಲಿ ಚರಿಸಿದೆ ನಾನು
ಭವರಹಿತ ನೀನು
ಮಾಯಾಪ್ರಪಂಚಕ್ಕೆ ಸಿಲ್ಕಿದೆ ನಾನು
ಮಾಯಾಮರ್ದನ ನೀನು
ಅಷ್ಟಮದಗಳೊಳು ದುಷ್ಟಬುದ್ಧಿಯಿಂದ
ಶ್ರೇಷ್ಠ ಪ್ರಭುವೆ ನಿಮ್ಮಸ್ಮರಣೆ ಮರೆದೆನು ||೧||

ಬಸವಾದಿ ಪ್ರಮಥರುದ್ದಂಡ ನೀನು
ವಸುಧಿಯೊಳಗುಳ್ಳ
ಕಿಸುಕುಳದೈವದ ಗಂಡ ನೀನು
ಶಶಿಧರನೆ ಹರನೆ
ಕುಸುಮಶರನ ಸುಟ್ಟು
ಭಸಿತವ ಧರಿಸಿದ
ವಷವ ಕಂಠದಲಿ ತಾಳಿದ ದೇವ ||೨||

ತ್ರಿಭುವನದೊಳಗತಿಶಯವಾಗಿ ಮೆರೆವ ತ್ರಿದಳದಲ್ಲಿರುವ
ಪ್ರಭುವೆ ನಿಮ್ಮ ಪಾದಕಮಲದಿರವ ಕೊಡು ಎನಗೆ ನೀ ವರವ
ವನಚರೇಶನನು ಹೇಸದೆ ಪೆತ್ತನ ಸಖನೇತ್ರನೀ
ಪಾಲಿಸೊ ದೊರೆಯೆ ||೩||

೯

ರಾಗ: ಸೋರಟ

ಅಣುಗನ ಆಶೆ ಬಿಡಿಸೊ ಅಲ್ಲಮಪ್ರಭು ||ಪಲ್ಲ||

ಆದಿ ಅನುಮಿಷಗೆ ಅನಾದಿ ಮಹೇಶನೆ
ಶೋಧಿಸಿದಂಥ ಶರಣರ ಹೃದಯನಿವಾಸನೆ ||೧||

ಕಂದುಗೊರಳನೆ ಕಂದರ್ಪನಯ್ಯನ ದೇವನೆ
ನಂದಿವಾಹನದೇವ ಇಂದುಶೇಖರನೆ ||೨||

ತ್ರಿಜಗವಂದಿತನೆ ಭುಜಗ ಭೂಷಣನೆ
ತ್ರಿದಳದಲಿ ನೆಲಿಸಿದ ಅಜನ ಕಪಾಲನೆ ||೩||

೧೦

ದೇವ ಪಾಲಯ ಮಾಮ್ ಸದಾಶಿವ
ದೇವ ಪಾಲಯಮಾಮ್ ||ಪಲ್ಲ||

ಕುಂಡಲ ಕುಂಡಲ ಮಂಡಿತ [೧][ಚಾರು][೧]
ಚಂಡೀಶ್ವರ ಭಾವಮಂಡಿತ ಮಹಾ ದೋ
ರ್ದಂಡ ವಿಕ್ರಮ ಪರಿಖಂಡಿತ ಮಹಾ ದೈತ್ಯ
ಮಂಡಲ ಸುಜನೋದ್ದಂಡಿ ಅಖಂಡಲಾರ್ಚಿತ
ಚಂಡಘನ ಮಾರ್ತಂಡ ಗಿರಿಕೋದಂಡಧರ ಮಹಾ ||೧||

ಅಂಧಕಾಸುರ ಪರಿಭಂಜನ ವಿಷ
ಕಂಧರ ವಿಹಿತ ಭವಾಂಜನ ಬಾ
ಲೇಂದು ಶೇಖರ ಪುರಭಂಜನ ಬಲಿ
ಬಂಧನ ವಿನುತ ನಿರಂಜನ ಆನಂದಿತಾಮರ
ವೃಂದ ಪರಮಾನಂದ ವರಗೋವಿಂದ ಸೇವಿತ ||೨||

ಪರಮ ಪಾವನ ಪರಿಭಾಷಣ ದಿನಕರ
ಚಾರು ಸನ್ನಿಭ ಭೂಷಣ
ಕರಿವರಕೃತ್ತಿ ಸುತೋಷ ಅಘಹರ
ಪುರವರ ಜನಪೋಷಣ ಅಂತಃ
ಕರಣ ನುತಚರಣ ಭವಸಂಸರಣ ದೀನೋದ್ಧರಣ ಪರಶಿವ ||೩||

## ಸ್ತುತಿರೂಪದ ಸ್ವರವಚನಗಳು

೧

ರಾಗ: ಕಾಲಂಗಡಾ, ತಾಳ: ದೀಪಚಂದ

ಏನ ಬೇಡಲೋ ನಾನು ಸಾಂಬ ನಿನಗೆ ||ಪಲ್ಲ||

---

೧-೧ ಲಿ (ಮೂ)

ಸುಡುಗಾಡದೊಳಗೆ ಇರುವ
ಬೇಡಿಕೊಂಡರೆ ಬಿಟ್ಟು ಓಡಿ ಹೋಗುವ ||೧||

ಯಾರೂ ಇಲ್ಲದವನೊ ನೀನು, ಒಬ್ಬರ ಮನೆ
ಸೇರಿಕೊಂಬವನೊ ನೀನು

[1][ಓರಂಗಲ್ಲೊ][1]ಳು ಕದ್ದು ನಾರಿ ಎಂಜಲ ಸವಿದು
ಧೀರ ಶರಣರ ಮನೆಯ ನೀರಹೊತ್ತವಗೆ ||೨||

ಕುಲವಿಲ್ಲದವನೊ ನೀನು ಬಹು
ಕಾಲದ ಮುದಿಯತ್ತೇರಿದವನೊ ನೀನು ಬ
ಯಲೊಳು ನಿಂತು ನಾ ನಿನಗೆ ಬಾಯಿ ತೆರೆದರೆ ಬ
ಯಲಿಗೆ ಬಯಲು ನಿರ್ಬಯಲಾದವನಿಗೆ ||೩||

ರುಂಡ [2][ಮಾಲ][2] ನೊ ನೀನು ಪ್ರಮಥಗಣ
ದಂಡನಾಯಕನೊ ನೀನು
ಜೋಡು ತೊಗಲ ಹೊದ್ದು ನಾಡೆಲ್ಲ ತಿರಿ
ದುಂಡು ಓಡ ಪಿಡಿದು ಬಿಕ್ಷೆ ಬೇಡಿಕೊಂಬ ದೇವಗೆ ||೪||

ದೋಷರಹಿತನೊ ನೀನು ಸರ್ವಾಂಗೆಲ್ಲಾ ಭಸ್ಮ
ಭೂಷಿತನೊ ನೀನು
ದೇಶದೇಶವ ಚರಿಸಿ ತೇರದಾಳದಿ ವಾಸ
ಈಶ ಅಲ್ಲಮ ಪ್ರಭುಲಿಂಗೇಶಗೆ ||೫||

೨

ರಾಗ: ಸಕಲಾಭರಣ

ನಿನ್ನ ನೆನೆವೆನೊ ನಿಜಭಕ್ತರಿಗೀಗ
ಉನ್ನತ ಪದವಿಯ ಈವ ಮಹಾದೇವ ||ಪಲ್ಲ||

ಸಕಲ ಭೋಗಂಗಳ ಸಟೆಮಾಡಿ ಘಟದೊಳು
ಸುಖಿಕರ್ತ ಸುಜ್ಞಾನಿ ಆಗಿರ್ಪ

---

೧-೧ ಊರಂಗದೊ(ಮೂ); ೨-೨ ಮಾಲಿಕ (ಮೂ)

ವಿಕಳಿತ ಭಾವವು ವಿನುತನೆ ತಿಳಿದವರ್ಗೆ
ಭಕ್ತವತ್ಸಲದೇವ ಭವರೋಗ ವೈದ್ಯನೆ ||೧||

ಕಾಮಕ್ರೋಧ ಲೋಭ ಮಲತ್ರಯಂಗಳಿಗೆ ನೀ
ಸೀಮೆಯಾಗಿ ನಿಜದ ಉಪಾಯದೋರೊ
ಸ್ವಾಮಿ ನೀನಲ್ಲದೆ ಈಯತಿ ದಾರಿಗೆ
ಪ್ರೇಮಪಾದವನಿಟ್ಟು ಸಲಹುವ ದೇವ ||೨||

ಭುವನದೊಳಗೆ ಭೂಕೈಲಾಸವಾಗೆ ಭೋ
ಆವಾಗೆ ಶ್ರುತಿ ಸಾರುತದ್ಯಾಕೊ
ದೇವ ಅಲ್ಲಮ ಪ್ರಭು ಮುಕ್ತಿದಾಯಕನೆಂದು
ಭಾವದಿಂದಲೆ ನಿಮ್ಮ ಭಜಿಸುವವರಿಗೆ ||೩||

೩

ರಾಗ: ಕನ್ನಡಕಾಂಬೋದಿ

ತೇರದಾಳಧ ಮಗಿ ಪ್ರಭು ಮೀರಿದ ವರದಾತ ಶಂಭು ||ಪಲ್ಲ||

ಅಧಿನತ ಆನಂದಪೂರಿತ
ಸದುಪದೇಶ ಸದೋದಿತ ||೧||

ದೇವತತಿವಿದೇವಗಣಿತ
ಮಾಯಾಮರ್ದನ ಗೈದಾತ ||೨||

ತಂದೆ ತ್ರಿದಲಸ್ವಾಮಿ ಅನಂತ
ಕಂದ ಜ್ಞಾನಿಯ ಗುರುಪ್ರಖ್ಯಾತ ||೩||*

೪

ರಾಗ: ಮಲ್ಹಾರ

ಪೊಗಳಲಳವೆ ಫಣಿಯುಗಳ ಸಾಸಿರ ಜಿಹ್ವೆ
ಅಗಣಿತ ನಮಿತನ
ಜಗವನಟಿಪ ಮಾಯೆಗೆ ನಿರ್ಮಾಯವಾದ
ಮೊಗೆಯ ಮಹೇಶ್ವರನ ||ಪಲ್ಲ||

---

* ಈ ಹಾಡಿನ ಅರ್ಥ ಅಸ್ಪಷ್ಟ (ಸಂ)

ಎರಡು ಕಮಲ ಬೇರ ಪರಿದು ಪ್ರಮಾಣದೊಳು
ಎರವಳಿದಿರುತಿಹ ಕರಣ ಚತುಷ್ಟಿಯ
ಚರಣವ ಉರದೊಳು ಬೆರಿಸೆಂದೆನುತಿರುತಿಹನ
ಅರಿಷಡ್ವರ್ಗದ ಅರಿವಿನಿತಿಲ್ಲದ ಅವಿರಳ ಪ್ರಾಣೇಶನ
ಪರಮನೇ ತಾನಾದ ತಾನೆ ಪರಮನಾದ ನಿರ್ವಾಣೇಶನ ||೧||

ನೀರಬೊಬ್ಬುಳಿಕೆಯೊಳ್ ನಿಲಿನೆ ನಿರಾಳ ನಾನೆರ್ವಿಯೊಳಿರುತಿಹನ
ನೀರೊಳಾರು ಕಲ್ಲುರುಳಿ ಮರುಳಾದಂತೆ
ಆರೂಢ ಪರಬ್ರಹ್ಮನ ಮುಟ್ಟಿ ನೆನೆವ ಮುನಿಜನ
ಹೃದಯ ಪಂಕಜದೊಟ್ಟಿಲೊಳಿರುತಿಹನ ||೨||

ಹುಟ್ಟು ಹೊಂದೆಂಬ ಭವ ರೇಖೆಯ
ನಿಟ್ಟೊರಸಿದನಾ
ಸೃಷ್ಟಿಗಧಿಕವಾದ ತೇರದಾಳಪುರ
ಪಟ್ಟಣದ ನೆಲೆವಾಸ
ತೊಟ್ಟನೆ ಚನ್ನಾಗಿ ತೋರುವಾಮೃತ ಮಗೆ
ಪಟ್ಟದಾ ಪ್ರಭುರಾಯ ||೩||*

೫೫

ರಾಗ: ಸಾರಂಗ

ಆರಿಗೂ ತಿಳಿಯದಮ್ಮಾ ಅಲ್ಲಯ್ಯನ ಪಾದಲೀಲೆ
ನಾರಿ ಶಿರೋಮಣಿ ಕಪಟನಾಟಕ ಸೂತ್ರಿಕನಂತೆ ||ಪಲ್ಲ||

ಓಂಕಾರ ವಜ್ರದ ಮೆಘೆಸಾಲೆ ವೃಘ್ರುಮ ಸುತೆ
ಆಕಾರ ಚಿತ್‌ಶಕ್ತಿಯೊಳಬ್ದೆ ಮಾರೆ ಮರುಳಾಟ
ಪಂಕಜ ಮಿತ್ರನು ಕೋಟಿ ಪ್ರಕಾಶ ಉನ್ಮನಿ ಮಾರ್ಗದಲಿ
ಶಂಕರ ಸಾಕ್ಷಿಕ ತಾನೆ ಸಾಲೆ ವೇದಗ್ರಾಮ ಸುತೆ ||೧||

ನಾಯಕ ಶಿರೋರತ್ನನೆ ನಾಗಭೋಗ ಘನರಾಗ
ಕಾಯ ಬ್ರಹ್ಮಾಂಡ ಕೀಲ ಬಲ್ಲರಾರೊ ಮಹಾತ್ಮನೆ

---

* ಈ ಹಾಡಿನ ಅರ್ಥ ಅಸ್ಪಷ್ಟ (ಸಂ)

ಮಾಯ ಮೊದಲಿಗ ತಾನೆ ಮಾಯಿಗೆ ನಿರ್ಮಾಯವಾದ
ಬಾಯಿಬಾರದ ಶಬ್ದ ಬಲ್ಲರಾರೊ ಮಹಾತ್ಮನೆ ||೨||

ಮಂಡಲಿಕಾಚಾರ್ಯರೂಪ ಮುಖ್ಯ ದಿವ್ಯಂಜನ ಸಿದ್ಧ ಅ
ಖಂಡಪರುಷ ಕುಟಿಲ ಕೋಳಾಹಳ ಮಾಯಾಕಾಂತ.
ಗಂಡುಮೀಸೆಗಳ ಗಂಡ ಗ್ರತಾಂ ಭೃತ್ಯರಾಯತಲ್ಲಮ
ಉಂಡ ಉಪವಾಸಿ ಬಳಸಿ ಬಾಲಬ್ರಹ್ಮಚಾರ್ಯನಲ್ಲಮ ||೩||*

೬

ರಾಗ: ಕಲ್ಯಾಣ

ನಂದಿಯನೇರಿದನೆ ಅಲ್ಲಮಪ್ರಭು ನಂದಿಯ ಕುಣಿಸಿದನೆ
ಧಿಂ ಧಿಂ ಧಿಂ ಧಿಮಿಕಿಟ ಎಂದು ನೂರೊಂದು ತಾಳದ ಗತಿಗೆ||ಪಲ್ಲ||

ಇಷ್ಟ [ವೆಂ]ದೆಂಬ ವಾದ್ಯವ ಪಿಡಿಯುತ ಮನ
ಮುಟ್ಟಿ ಸುಜ್ಞಾನ ಕಂದವ ತಟ್ಟುತ ಕಿಟ್ಟಾಕ
ಕಿಣಿ ಕಿಣಿ ನಕಗಿಣ ತೊಂಗಿಣ ತತ್ತರೆ ತತ್ತರೆ ಕಿಟ
ತತ್ತು ತತ್ತು ಗತಿ ಕಟ್ಮಳೆ ಕೌತಾಳದ ಗತಿಗೆ ||೧||

ಹಕ್ಕರಕಿಯ ಗುರು ಕರುಣ ಧಾರವವ
ಮಿಕ್ಕ ಕರಣದ ಪಾವಡವ ಮೆಟ್ಟಿ
ತಕ್ಕಡ ತರಿಗಡ ಕೃತಗಡ ಧಿಮಿಕಿಗ
ಧಕ್ಕಡ ದೊಧಿಗಾ ಧಾಧಿಗಿ ದಿಮಿಕಿಟ
ಧಕ್ಕಡ ಧರಿಗಡ ಧಿಕ್ಕಡ ಧಿತೊಲಾ ಕಣಂಗತೊ
ಜಾಣಕದ ಗ [ತಿ] ಗೆ ||೨||

ನೆತ್ತಿಯ ಪ್ರಣಮವನವರಿಸುತ
ಮತ್ತೆ ಪಂಚಕ ಪಂಚಾಕ್ಷರಿಯ
ತೊತ್ತಿಕು ಥೊಂಗಿಣ ತಣತಣ
ತತ್ತರಿಸುವವಟ್ಮಗಣಾಂಗಿಣಿ
ಕಿತ್ತಟಕಿರ್‍ರ್ರಟ ನಕಗಿಣಿ ಧಿಮಿತೊವಿಸ್ತರಿಸಿದ ಬಸವ ಪ್ರಭುರಾಯ||೩||

---

* ಈ ಹಾಡಿನ ಅರ್ಥ ಅಸ್ಪಷ್ಟ (ಸಂ)

೭

ರಾಗ: ಧನಾಶ್ರೀ

ಜಯ ಜಯ ಅಲ್ಲಮನಾಥ
ಮಾಯಾ ಪ್ರಪಂಚದಿ ಎಳ್ಳಿನಿಷ್ಟಿಲ್ಲ ಪ್ರಖ್ಯಾತ ||ಪಲ್ಲ||

ಅಸುರರ ಗೆಲಿದಂಥದೇವ
ಅಸುರಗೊಲಿದು ಅವನ ಮನೆ ಬಾಗಿಲ ಕಾಯ್ವ
ಭಜಿಪರ್ಗಷ್ಟಸಿದ್ಧಿಯನೀವ
ಮಹಾನಿತ್ಯ ಆನಂದದ ಲೀಲಾ ಸ್ವಭಾವ ||೧||

ಮದನಮರ್ದನ ಮಹಾಧೀರ ಬಹು
ವಿಧದಿಂದ ದಂಡಿಪ ಯಮನ ಸಂಹಾರ
ಒದಗಿದ ಪಾಪವಿದೂರ ||೨||

ವ್ಯಾಳ ಕಂಕಣ ಕಟಿಸೂತ್ರ
ಭಾಳಾಂಬಕ ವೇದಕೆ ನಿಲುಕದ ಸ್ತೋತ್ರ
ಮಳಲೊಳ್ ಬೆರೆದ ಸತುಪಾತ್ರ
ಭಾಳ, ಹರಿಸುರ ನಮಿತ ಚರಣ ಶತಪತ್ರ ||೩||

೮

ಎಲ್ಲ ದೈವಂಗಳ ನಲ್ಲ ನೀನಹುದೈ ಅಲ್ಲಮಪ್ರಭುವೆ
ಖುಲ್ಲ ಮನುಜರೆದೆದದಲ್ಲಣನಹುದೈ ||ಪಲ್ಲ||

ನಿಲ್ಲದಿಳೆಗೆ ಬಂದು ಹೊಲ್ಲ ಮಾಯಿಯ ಗೆಲಿದ
ಫುಲ್ಲಶರನ ಸುಟ್ಟ ಬಲ್ಲಿದನಹುದೈ
ಕಲ್ಲಿಲಿಟ್ಟವಗೆ ಬಿಲ್ಲಲಿ ಹೊಯ್ದವಗೊಲಿದ
ಬಲ್ಲಂಥ ಶರಣರೊಳ್ ಇಂಬಿಲ್ಲದಿರುತಿಹ ||೧||

ಸಲ್ಲಲಿತವಾಗೆನ್ನಲ್ಲಿ ನೆಲೆಗೊಳ್ಳಯ್ಯ, ಎನ್ನ
ಸೊಲ್ಲಿಗೆ ಭಿನ್ನವಿಲ್ಲದೆ ದಯವಾಗು
ಭಿಲ್ಲಮನಿಗೆ ಪಾಲದ ಮಲ್ಲಿಕಾರ್ಜುನದೇವ
ಕಲ್ಲಿನೊಳ್ ಬೆರೆದ ಸುರವಲ್ಲಭ ನಮಿತನೆ ||೨||

ಹುಲ್ಲಪುರುಷನ ಕೈಯಲ್ಲಿ ವೇದವನೋದಿಸಿ
ಚಲ್ಲಗಂಗಳೆಯರ ಒಲುಮೆಗೆ ಸಿಲ್ಕದ
ಚಲ್ವಯಮನ ನಡುಗಣ್ಣನಲ್ಲಿ ಉರುಪಿದ
ಛಲದಂಕ ಚನ್ನನಿಗೆ ಕಲಿಯಲ್ಲಿ ವರವನಿತ್ತೆ ||೩||

೯

ಜಗದೊಳು ಪ್ರಭು ನಿಮ್ಮ ಸರಿ ಎನ್ನಬಹುದೆ
ವಿಧಿ ಸುರವಲ್ಲಭ ಅಜಗೆ [೧][ಪ್ರಭು][೧] ಲಿಂಗ ||ಪಲ್ಲ||

ಇದಿರಿಸಿದವರನು ಬೆದರಿಸಿ ಮೆಟ್ಟಿದಿ
ಹೆದರಿತೊ ಮೂಜಗ ಅದಿರಿತೊ ಧರಣಿ ||೧||

ಇಟ್ಟರೆ ವರವು ಕೊಟ್ಟರೆ ಶಾಪವು
[೨][ನಾಡ][೨]ಜನರೊಳು ಈ ಪರಿ ನಡಿಯೆಂದೆ ||೨||

ಈ ಪರಿಯ ನೋದ ಹೇಳಿ ಸಹಜಾನಂದ
ತ್ರಿ ಮಲಗೆ [೩][ಅಗಾಧ][೩] ಮಾಡಿದಿ ಬೋಧೆ ||೩||

೧೦

ರಾಗ: ಗೌರಿ

ಲಿಂಗ ಲಿಂಗ ನೀ ಬಾರೊ
ಹೊಂದಿ ನೀ ಮಾತಾಡದಿರೊ
ಕಂದುಗೊರಳದೇವ ಬಾರಯ್ಯ ಅಲ್ಲಮಪ್ರಭು ||ಪಲ್ಲ||

ಹಸಿರು ಹಳದಿನೆ ಉಟ್ಟು
ಮೇಲೆ ಕಾವಿಯ ಹೊದ್ದು
ಲೋಲಜಂಗಮನಾಗಿ ಬಾರಯ್ಯ ||೧||

ಬಣ್ಣ ಬಿಳಿದನೆರಡನುಟ್ಟು
ಹೆಣ್ಣು ಮಾಯಾಂಗನೆಯ ಜರಿದು
ಉಣ್ಣದವರಲ್ಲಿ ಉಂಡು ಬಾರಯ್ಯ ||೨||

---

೧-೧ ಇಭ(ಮೂ); ೨-೨ ನಾಡ್ಸ (ಮೂ); ೩-೩ ಆಗದ (ಮೂ)

ದುಂಡುಮಲ್ಲಿಗೆ ಹೂವ
ಮಂಡೆಯೊಳಗಿಟಕೊಂಡು
ಚೆಂಡನಾಡುತ ಮನೆಗೆ ಬಾರಯ್ಯ ||೩||

ಭೂಮಂಡಲದೊಳಗೆಲ್ಲ
ಕೊಂಡಾಡಲಳವಲ್ಲ
ಹಿಂಡುದೈವದ ಗಂಡ ಬಾರಯ್ಯ ||೪||

## ಗುರು - ಸ್ತುತಿರೂಪದ ಸ್ವರವಚನಗಳು

೧

ರಾಗ: ಸಾರಂಗ

ಗುರುಪದ ಸೇವೆ ಮಾಡೊ ಬಿಡದೆ ||ಪಲ್ಲ||

ಗುರುಪರಬ್ರಹ್ಮೆಂದರಿದು ನಿಶ್ಚಯಿಸಿ
ಹರುಷದಿ ತ್ರಿಕರಣದಲ್ಲಿ ಮಾಡೊ ಬಿಡದೆ ||೧||

ಜಗಸಚರಾಚರ ಗುರುರೂಪೆಂದು
ಬಗೆಬಗೆ ಪೂಜೆಗಳಿಂದ ಮಾಡೊ ಬಿಡದೆ ||೨||

ನಿರುಪಮ ನಿತ್ಯನಿರಂಜನ ಸಚ್ಚಿತ್
ವರ ಬಸವಪ್ರಭುವಿನ ಧ್ಯಾನ ಮಾಡೊ ಬಿಡದೆ ||೩||

೨

ಶರಣೆಂದು ಪಿಡಿವೆ ಶ್ರೀ ಗುರುಪಾದ ದಯ-
ಕರುಣದಿಂದಲಿ ಎನ್ನ ಕಾಯ್ವುದೀಪಾದ ||ಪಲ್ಲ||

ವಾದ ತರ್ಕಕ್ಕೆ ವರ್ಜಿತಪಾದ। ನಾಲ್ಕು
ವೇದ ಶಾಸ್ತ್ರಕೆ ನಿಲುಕದು ನಿಜಪಾದ

ಆದಿಗಣಾದಿಗಾಧಾರ ಪಾದ। ವಸ್ತು
ಭೇದವ ತೋರಿತು ಎನಗೆ ಈ ಪಾದ ||೧||

ಪಾಪವಿದೂರ ಪಾವನಪಾದ।ಮುಕ್ತಿ
ಸೋಪಾನ ಮಾಡಿತು ಸುರರಿಗೀಪಾದ
ವಿಪರೀತ ವಿಶ್ವರೂಪನಪಾದ।ನಿತ್ಯ
ಜಪ ತಪ ಜಾತ ಹೊ[ರೆ]ವು ದೀಪಾದ ||೨||

ಎರಡೊಂದು ಲೋಕವನಾಳ್ವುದು ಪಾದ। ಭಕ್ತಿ
ಸಾರಾಯ ಶರಧಿಯ ಸವಿಗೊಂಬಪಾದ
ಘೋರಪಾತಕ ಪರಿಹರಪಾದ।ಪುಣ್ಯ
ವಾರಿಧಿ ಶಶಿಧರ ವಸುಧಿಗೀಪಾದ ||೩||

ಕಂಟಕ ದುರಿತ ಕಾಯ್ವುದು ಪಾದ। ವೈರಿ
ಗಂಟಲಗಾಣದು ಘನಮಹಿಮಪಾದ
ಉಂಟೆನ್ನ ಪಾವಡದರ(?) ಪಾದ। ಕೀರ್ತಿ
ಎಂಟು ದಿಕ್ಕಿನಲಿ ತುಂಬಿ ಎಸೆವುದೀಪಾದ ||೪||

ಸರ್ವತೀರ್ಥಕೆ ಅಧಿಕವೀಪಾದ ಕಾಶಿ
ಪರ್ವತ ಹಂಪಿ ಎನಿಸುವದೀಪಾದ

ಗೀರ್ವಾಣ ಅಸುರನಮಿತ ಪಾದ
ಉರ್ವಿಯೊಳಲ್ಲಮಪ್ರಭುವರಪಾದ ||೫||

೩

ಮತಿಮಂದಪ್ರಾಣಿ ಇನ್ನರೆ ನಂಬು ಗುರುವಿನ ||ಪಲ್ಲ||

ನಾನಾ ವಾಸನೆಯ ಭ್ರಮಿಸಿ
ನಾನು ನೀ ನನ್ನದೆಂದು
ಜ್ಞಾನರತ್ನವ ಕಳೆವರೆ? ||೧||

೧-೧ ರವ (ಮೂ)

ಮಾಯಾಪಾಶಕೆ ಸಿಲುಕಿ
ಸಾಯಾಸದಿಂದ ಬಳಲಿ
ದೇಹದ ಭ್ರಾಂತಿ ಕಳೆವರೆ ||೨||

ಜ್ಞಾನಬೋಧನಪ್ರಭು
ಜ್ಞಾನಾಬ್ಧಿ ಗುಹೇಶ್ವರ-
ಧ್ಯಾನವ ಮಾಡದಿರುವರೆ ||೩||

## ನೀತಿ ಬೋಧಾರೂಪದ ಸ್ವರವಚನಗಳು

೧

ರಾಗ: ಕಾಂಬೋದಿ

ತಮ್ಮೊಳು ತಾವು ಕಾಣಲರಿಯರಲ್ಲಾ
ಏನ ನೋಡಿದರೇನು ಎಷ್ಟು ಕೇಳಿದರೇನು ||ಪಲ್ಲ||

ಆದಿ ಅನಾದಿ ಅವಿದ್ಯೆಯ ಮೀರದೆ
ವೇದಪುರಾಣ ಹದಿನೆಂಟರೊಳು
ಕೇದಗೆ ವೃಕ್ಷದೊಳು ಸರ್ಪವೇರಿದಂತೆ, ಅ-
ನಾದಿ ಮೂರುತಿ ತಾನೆಯೆಂದರಿಯದೆ ||೧||

ಕೊರಳೊಳಗಿದ್ದ ರತ್ನಮಾಲೆಯ ತಿಳಿಯದೆ
ಹೊರಗರಸುವುದು ಹದಿನಾಲ್ಕು ಲೋಕ ಜಗ
ಭರಿತ ನಿಷ್ಕಳ ನಿರಂಜನಸ್ವಾಮಿ
ಕರದೊಳಗಿದ್ದ ಲಿಂಗವ ನಂಬಲರಿಯದೆ ||೨||

ಎಲ್ಲ ವಿದ್ಯೆಯ ಕಲಿತು ಏಕೋದೇವನಮರೆತು
ಸೊಲ್ಲಿನೊಳಗೆ ತಾನು ತಿಳಿಯಲಿಲ್ಲ
ಎಲ್ಲ ಮನೆಯೊಳಿದ್ದು ಬೇರೆ ಅರಸುವಂತೆ
ಅಲ್ಲಮಪ್ರಭು ಆನಂದ ಕಲ್ಯಾಣದಯ್ಯ ||೩||

೨

ರಾಗ: ಸಾರಂಗ

ಮೂಲ ತಿಳಿದು ಮುಕ್ತನಾಗೆಲೊ ಶಿವಮಂತ್ರದಿ
ಮೂಲದಲ್ಲಿ ಮೂರುಮಂತ್ರ ||ಪಲ್ಲ||

ಕೀಲದಲ್ಲಿ ಮೊದಲು ತಿಳಿದು
ಶೂಲಧರನ ಸ್ಮರಣೆಯಿಂದ
ಲೋಲನಾಗಿ ಇರು ಕಾಣೊ ||೧||

ಆರುಚಕ್ರಗಳನು ಪಿಡಿದು
ಕ್ರೂರ ಗುಣಗಳನ್ನು ಜರೆದು
ಮಾರಹರನ ಸ್ಮರಣೆಯಿಂದ
ಸಾರವನ್ನು ತಿಳಿಯ ಕಾಣೊ ||೨||

ಅಷ್ಟಮದಗಳೆಂಟು ಒದಗಿ
ಕಷ್ಟಪಡುತ ಇರುವುತಿರಲು
ಶ್ರೇಷ್ಠ ಪ್ರಭುವಿನ ಚರಣ ಅಂ
ಗುಷ್ಠದಲ್ಲಿ ಬೆರೆಯ ಕಾಣೊ ||೩||

೩

ರಾಗ: ಧನಾಶ್ರೀ

ಸಾಧುಗಳನಿಂದೆ ಮಾಡಬೇಡೆಲೊ
ಹಂದಿಜನ್ಮಕೆ ಬೀಳಬೇಡೆಲೊ ||ಪಲ್ಲ||

ನೆಚ್ಚಿರೆ ತನುವನು ಮನುಜ ನೀ ಇಚ್ಛೆಯಿಂದ ತುಚ್ಛಭಾವಿಸಿ
ಚೂಚಾಕತನದಲಿ ಮುಚ್ಚಿರೆ ಕಣ್ಣನು
ಮೆಚ್ಚದು ಲೋಕ ಮೊಚ್ಚೆಗೆ ಕಡೆಯ ||೧||

ತೊಡಕಿದ ವಿಷಯಕೆ ಹೆಡಕಿನಲಿ ಭವ
ಅಡಕಲಿ ಪಾಟ ಮಿಡುಕುತಲಿ ಮುಂದೆ
ಕೆಡಕು ಹಾದಿಗೆ ಸಡಕು ಹಾಕಿ ಯಮನರು
ಹೆಡಕಿಗೆ ಹೊತ್ತರು ||೨||

ಏನಾದರೆ ಸುಖ ನಿನಗಾ ದ್ಯೆಹಿಕನೀನೆ
ನಿನ್ನೊಳು ಬೇನಿಲಿ ಬಳಲಿ
ಜ್ಞಾನಬೋಧನ ಪ್ರಭು ಸಾನುಕುಲ ಇರಲಿಕ್ಕೆ
ಹೀನಗುಣಗಳನು ಬಯಸುವರೇನೊ ||೩||*

೪

ದುರ್ಜನ ಸಂಗವ ಜರಿ ಜರಿ ನೀ ||ಪಲ್ಲ||

ಮಾಯಾಪಾಶಕ್ಕೆ ಸಿಲ್ಕಿ ವಿಷಯಕ್ಕೆ ಆಗಲುಬೇಡ ಗುರಿ
ರಾಯ ಸದ್ಗುರುವಿಗೆ ಶರಣವ ಮಾಡಿ
ವಾಕ್ಯಾಮೃತವ ಸುರಿ ಸುರಿ ನೀ ||೧||

ಮನಸಿನ ಒಳಗಿನ ಗರ್ವದ ಮೂಲವ ಬಿಡಬೇಕೊ ಈ ಪರಿ
ತನು-ಮನ-ಧನ ಶ್ರೀ ಗುರುವಿಗೆ ಅರ್ಪಿಸಿ
ಭಾನದೇಹದ ಮರಿ ಮರಿ ನೀ ||೨||

ಆತ್ಮಬೋಧನ ಪ್ರಭುವಿನ ಭಜನಿ ಮಾಡಿದರದಿದೋರಿ
ನಿತ್ಯ ನಿತ್ಯ ವಿಚಾರನೋಡುತ ಸ್ವಾತ್ಮಸುಖದೊಳ್ ಬೆರಿ ಬೆರಿ ನೀ||೩||*

## ಸತಿ-ಪತಿ ಭಾವ ಮತ್ತು ತತ್ವ-ಬೆಡಗು ಸ್ವರವಚನಗಳು

೧

ರಾಗ: ಎರಕಲ ಕಾಂಬೋದಿ

ಅಗಲಿ ಜೀವಿಸಲಾರೆನೆ
ನಗೆಮೊಗದ ಅಲ್ಲಮನ
ಅಗಲಿ ಜೀವಿಸಲಾರೆ ಸುಗುಣ ಕಾಂತನ ತೋರೆ
ಜಗದೊಳರಿದು, ಇಂಥ ಬಗೆಯ ಬಲ್ಲವರಾರೆ ||ಪಲ್ಲ||

---

* ಈ ಹಾಡಿನ ಅರ್ಥ ಅಸ್ಪಷ್ಟ (ಸಂ)

ವನಿತೆಬಾರೆಂದು ಬಣ್ಣಿಸಿ, ಬಿಗಿದಪ್ಪಿ
ಮನದ ಘನಸಂಶಯವನು ಸಣ್ಣಿಸಿ

ಆರಾರು ಅರಿಯದ ಘನ ಚಿದ್ರಸವನುಣ್ಣಿಸಿ
ಶತಮನ್ಮಥಜಿತ ತಾನೆನಿಸಿ
ಸಮರಸಕೂಟದಿ ಸುಖವೆನಿಸಿ
ತನುಕರಣಾದಿಗಳ ಇಲ್ಲೆನಿಸಿ, ಮೈಮರೆಸಿದ ಸುಗುಣನ ||೧||

ನವಯೌವ್ವ [೧][ನೆಯಳ][೧] ನೋಡುತ, ಅನು
ಭವ [೨][ಜ್ಯೋತ್ಸ್ನ][೨]ಯೊಳು ವಿವಿಧ ಚುಂಬ
ನವ ಮಾಡುತ ಬಹು ವಿಧದಲಿ
ತವಕದಿಂ ಕಲೆಯ ತೀಡುತ
ಕರುಣಾರಸವಂಗದಿ ದ್ರವಿಸಿ
ಸಕಲಾಗಮಗತಿ ಸಂಭವಿಸಿ
ನಿಜಸುಖದ ಸೊಬಗನನುಭವಿಸಿ ಎರಡಿಲ್ಲದ ಪುರುಷನ ||೨||

ಕನಕಮಾಣಿಕದ ಸೊಂಪಿನಾಭರಣವನಳವಡಿಸಿ
ಘನ ಚೀನಾಂಬರದ [೩][ಲಂ][೩]ಪಿನ ಸ್ತನವನಜ ಮುಕುಲದ
ವಿನುತ ಚೆಂದುಟಿಯ ಕೆಂಪಿನ
ಸೊಗಸಿನ ಭಾಮಿನಿ ಬಾರೆನುತೆ, ಮನದ ವಾಂಛಿತವೇನೆನುತೆ
ಲಖಿಮೇಂದ್ರ ವರದ [೪][ನೆನುತೆ][೪]
ಪ್ರಭುವೆನಿಸಿದ ರಮಣನ ||೩||

೨

ಹುಟ್ಟುವ ಹೊಂದುವ ಜೀವನ ಮಾಯವು
ಮುಟ್ಟಹ ಮನವಿದರೊಳಗೊ ಹೊರಗೊ ||ಪಲ್ಲ||

ಪಿರಿದಾಗಿ ತತ್ತಿಯುದ್ಭವಿಸಲು
ಮರಿ ಆಕಾರವ ಮಾಡಲು ಪಕ್ಕಿ
ತೆರನೆನಿಸಿ ಆಕಾಶದ ಪಥದೊಳು
ನೆರೆ ಸಾರುವುದಿದು ಗಾಳ್ಯೋ ಗರಿಯೊ ||೧||

---

೧-೧ ಎಳೆ (ಮೂ); ೨-೨ ಚೋತ್ನಿ; ೩-೩ x (ಮೂ); ೪-೪ ನನೆನುತ (ಮೂ)

ಸಪ್ತೇಳು ಸಾಗರದ ಒತ್ತಿನ ಹೊಳೆಯೊಳು
ಬಿತ್ತದೆ ಬೆಳೆದ ಚಿಂಪಿಯ ನಡುವೆ
ಚಿತ್ತಿಯ ಮಳೆಯ ಮರಿಮಳೆ ಉದ್ಭವಿಸಲು ಜಲ
ಮುತ್ತಾಗಿಹುದಿದು ಮಳೆಯೊ ಹೊಳೆಯೊ ||೨||

ಪಶುವಿನ ಭಸುರೊಳು ಮುಸುಕಿಹ ಹಾಲನು
ವಸುಧಿಯ ಜೀವ ಜೀವನಕಾಗಿ
ಪಶುವಿನ ಶಿಶುವನು ವಂಚಿಸಿ ಬೇಗದಿ
ಒಸೆದು ತೋರುವುದಿದು ಮೋಹೋ ಮೊಲೆಯಾ ||೩||

ಧರೆಗೆ ವೃಷ್ಟಿಯ ಬಿಂದುಗಳುದುರಲು
ಹರಿವ ನೀರಿನ ಮೋಹವ ಕಂಡು
ಪರಿತೋಷದಲಿದಿರೇರುವ ಮೀನಿನ
ನಿರುತಾಧಾರವು ನೀರೋ ನೆಲನೊ ||೪||

ನಾನಾಕಾರದ ರೂಪಿಲಿ ಜನಿಸಿತು
ನಾನು ನೀನೆಂಬ ಸಂದೇಹವಳಿದು
ಜ್ಞಾನಾನಂದನ ಗುರುಗುಹೇಶ್ವರನೊಳು
ತಾತಾ ಎಂಬುದು ತನುವೊ ಮನವೊ ||೫||

೩

ರಾಗ: ಭೈರವಿ

ಆರು ಅರಿಯರಲ್ಲಾ ಈ ಲಿಂಗವ ಮತ್ತಾರು ಅರಿಯರಲ್ಲಾ ||ಪಲ್ಲ||

ಗಗನದಾ ಬಾವಿಯೊಳು ಅಗ್ಗಣೆಯ ತುಂಬಿ ತಂದು
ಘನ ಮಹಾಲಿಂಗಕ್ಕೆ ಮಜ್ಜನನೀಡುವರಲ್ಲ ||೧||

ಹೊರಗಣಪತ್ರಿಯ ತಂದು ಹರಗಣ ಪೂಜೆಯ ಮಾಡಿ, ಇಂಥ ಬಲ್ಲ
ಗುರುಹಿರಿಯರೆಲ್ಲ ಭರದಿ ಸೂರೆ ಹೋಗುವಂಥ ||೨||

ನವನಾಳ ಮಧ್ಯದಲ್ಲಿ ಸುಳಿದು ಸೂಕ್ಷ್ಮದ
ಬೆಳಗಿನ ಕಂಬದ ಬಿಂಬದ ಸುಖವ ||೩||

ಗಂಧದ ಪುಷ್ಪವ ತಂದು ಕುಂದದ ಪೂಜೆಯ ಮಾಡಿ ಆ
ನಂದದೀವಿಗೆಯ ಬೆಳಗಿನ ಬೆಳಗ ||೪||

ಪರುಷದ ಗಿರಿಯನು ಕಡಿದೆನೆಂದು ಹೋ
ದರೆ ಹಿಡಿದಿರ್ದ ಉಳಿಗೊಡಲಿ ಪರುಷವಾದದ್ದಲ್ಲವೆ ||೫||

ಘನ ಮಹಾಪ್ರಸಾದ ಮಹಾಲಿಂಗಕ್ಕರ್ಪಿಸುತಮರ
ಗಣಂಗಳ ತೃಪ್ತಿಗೌಷಧವದು ||೬||

ಆದಿಪ್ರಸಾದವ ಭೇದಿಸಬಲ್ಲರೆ, ನಮ್ಮ ತ್ರಿಪುರಾಂತಕಲಿಂ
ಗದಲ್ಲಿ ಬಸವಪ್ರಭುಗಲ್ಲದೆ ||೭||

## ಮಂಗಳಾರತಿ ಪದಗಳು

೧

ರಾಗ: ಭೀಮಪಲಾಸ, ತ್ರಿತಾಳ

ಮಂಗಳಂ ಅನರ್ಘ್ಯ ಗುಣಗಣಮಣಿಸಮುದ್ರಾಯ
ಮಂಗಳಂ ಮಹೇಶ್ವರ ಶರಾಸನಾಯ
ಮಂಗಳಂ ಉಮಾರ್ಧಪ್ರತಿಕಾಯ ತಾಂಗಾಯ
ಮಂಗಳಂ ಅಜಾಂಬಕಕರಾಲಯ ತೇತಿ ||ಪಲ್ಲ||

ಮನ್ಮಥಮದಾಂಶು ಮತ್ಫಲ ಕರಿವರೇಣ್ಯಾಯ
ಚಿನ್ಮಯ ಮುನೀಶ್ವರ ಹೃದಯಾಲಯಾಯ
ಸನ್ನುತ ಧರಾಧರಾಧಿಪ ವಜ್ರಶೃಂಗಾಯ
ಭಸ್ಮಾಣಿ ಫಣಿಶ್ವರ ವಿಷಾಯ ತೇ ||೧||

ಚಂಡಕರ ಶಶಿ ಶಿಖಿ ಪ್ರಚಂಡ ಪುರನಯನಾಯ
ದಂಡಧರ ದುಷ್ಟಮದ ಖಂಡನಾಯ
ಪುಂಡರೀಕಾಕ್ಷ ವರಕಾಂಡಾಯ ನಿಗಮತತಿ
ಕಾಂಡಾಯ ವಿಷ್ಟ ವಿಷ್ಟವಪಿ ಚಂಡಾಯ ತೇ ||೨||

ಪರತರ ತ್ರಯೋದಶದಳಾಖ್ಯ ಪುರನಿಲಯಾಯ
ಗುರುಮಹಾಂತಾಯ ಪ್ರಭು ಯತಿವರಾಯ
ಸುರನರೋರಗನಮಿತ ಚರಣಾಯ
ಸೂರಿ ಶುಭವರದಾಯ ಸುಜನಾಳಿ ಶರಣಾಯ ತೇ ||೩||

೨

ರಾಗ: ಸೋರಟ

ಮಂಗಲ ಬೆಳಗುವೆನು ಮಹಾಪ್ರಭುವರಗೆ
ಮಂಗಲ ಬೆಳಗುವೆನು ||ಪಲ್ಲ||

ಮಂಗಲಾಂಗಮುನಿ ತುಂಗ ಕೃಪಾಂಗ
ಮಂಗಲ ಶಿವಹರಗೆ ||೧||

ರಾಜರಾಜ ಸಖರಾಜ ಶಶಿಮೌಳಿ
ರಾಜವಿಸ್ತಾರನಿಗೆ ||೨||

ಕಂದರ್ಪಹರ ಶಿವ ನಂದಿವಾಹನಪುರ
ಚಂದುಳ್ಳ ಪ್ರಭುವಿಗೆ ||೩||



೩

ರಾಗ: ಸಾರಂಗ

ಶ್ರೀ ಪ್ರಭುವಿಗೊಂದಾರತಿ ಬೆಳಗುವೆನು
ಮಹಾಪ್ರಭುವಿಗೊಂದಾರತಿ ಬೆಳಗುವೆನು ||ಪಲ್ಲ||

ಅಂಬರಕೇಶ ಶಂಬರಹರಿನಾಶ
ತುಂಬುರ ನಾರದಾದಿ ವಂದಿತೇಶ ||೧||

ಸುಂದರಲಖುಮೇಂದ್ರನ ಆಲಯದಿ
ಚಂದದಿ ಬಂದು ಅಲ್ಲಮನೇ ರಕ್ಷಿಸು ||೨||

ಧರೆಯೊಳು ಜೀರಗಾಮೃತಪುರವಾಸ
ವಾರಿಜಜನುತ ಗುರುಸಂಗಮೇಶ ||೩||

## ಸಮಗ್ರ ಸ್ವರವಚನ ಪ್ರಕಟನ ಯೋಜನೆ

ಅನುಭಾವದ ವಾಚನಪಾತಳಿಗಾಗಿ ಬರೆದ "ವಚನ ಸಾಹಿತ್ಯ"ದಂತೆ, ಶ್ರವಣಪಾತಳಿಗಾಗಿ ಬರೆದ "ಸ್ವರ ವಚನ ಸಾಹಿತ್ಯ"ವು ಕನ್ನಡಕ್ಕೆ ವೀರಶೈವರು ನೀಡಿದ ಅಪೂರ್ವ ಕೊಡುಗೆಯೆನಿಸಿದೆ. ಗುಣ–ಗಾತ್ರ ದೃಷ್ಟಿಯಿಂದ ಗಣ್ಯವೆನಿಸಿರುವ ಈ ಸಾಹಿತ್ಯದ ಸಮಗ್ರ ಪ್ರಕಟನ ಯೋಜನೆಯನ್ನು "ಶಿವರಾತ್ರೀಶ್ವರ ಗ್ರಂಥ ಮಾಲೆ"ಯ ಮೂಲಕ ಕೈಗೆತ್ತಿಕೊಂಡಿದ್ದು, ಈವರೆಗೆ ಬೆಳಕು ಕಂಡ ಸಂಪುಟಗಳು ಹೀಗಿವೆ :

**ಒಂದನೆಯ ಕಂತು : ೧೯೯೫**

ಸ್ವರವಚನ ಸಾಹಿತ್ಯ ಸಂಪುಟ ೧
–(ಸಂ.) ಎಸ್. ಶಿವಣ್ಣ

ಸ್ವರವಚನ ಸಾಹಿತ್ಯ ಸಂಪುಟ ೨
–ಎಸ್. ಶಿವಣ್ಣ

ಸ್ವರವಚನ ಸಾಹಿತ್ಯ ಸಂಪುಟ ೩
–ಜಿ. ಜಿ. ಮಂಜುನಾಥ್

ಸ್ವರವಚನ ಸಾಹಿತ್ಯ ಸಂಪುಟ ೪
–ವೈ. ಸಿ. ಭಾನುಮತಿ

ಸ್ವರವಚನ ಸಾಹಿತ್ಯ ಸಂಪುಟ ೫
–ಕೆ. ಆರ್. ಶೇಷಗಿರಿ

**ಎರಡನೆಯ ಕಂತು : ೧೯೯೭**

ಸ್ವರವಚನ ಸಾಹಿತ್ಯ ಸಂಪುಟ ೬
–ಎಸ್. ಎಂ. ಹಿರೇಮಠ

ಸ್ವರವಚನ ಸಾಹಿತ್ಯ ಸಂಪುಟ ೭
–ಶಿವರಾಜ ದೇವಪ್ಪ

ಸ್ವರವಚನ ಸಾಹಿತ್ಯ ಸಂಪುಟ ೮
–ಬಿ. ವಿ. ಮಲ್ಲಾಪುರ

ಸ್ವರವಚನ ಸಾಹಿತ್ಯ ಸಂಪುಟ ೯
–ವೀರಣ್ಣ ರಾಜೂರ

ಸ್ವರವಚನ ಸಾಹಿತ್ಯ ಸಂಪುಟ ೧೦
–ವೈ. ಸಿ. ಭಾನುಮತಿ

---

ಜಗದ್ಗುರು ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು